# ರವೀಂದ್ರನಾಥ ಠಾಕೂರ್
# ಕವನಗಳ ಓದು

**ಸಿ.ಪಿ.ನಾಗರಾಜ**

**ನಾಗು ಸ್ಮಾರಕ ಪ್ರಕಾಶನ**
೭೫, ೫ನೆಯ ಕ್ರಾಸ್, ' ಎ ' ಬ್ಲಾಕ್, ಕ್ರಿಶ್ಣ ಗಾರ್ಡನ್
ಆರ್.ವಿ.ಕಾಲೇಜು ಪೋಸ್ಟ್, ಬೆಂಗಳೂರು–೫೬೦ ೦೫೯

**RAVINDRANATHA TAGORE KAVANAGALA ODU**
by C.P.Nagaraja, Published by Nagu Smaraka Prakashana,
75, 5th Cross, 'A' Block, Krishna Garden, R.V.College Post,
Bengaluru-560 059
Mobile: 9986347521

First Edition : 2024
Page : 76
Price : **Rs. 100/-**
Paper : Stora Creamy
Size : Demy 1/8
Copies : 500

ಪುಟಗಳು : 76
ಪ್ರತಿಗಳು : 500
ಬೆಲೆ: ರೂ. : **ರೂ. 100/–**
ಪುಟ ವಿನ್ಯಾಸ : ಕೆ.ಆರ್. ಹರೀಶ್, 8553184584
ಮುಖಪುಟ ವಿನ್ಯಾಸ : ಓಂಶಿವಪ್ರಕಾಶ್, ಟೆಕ್‌ಫಿಜ್ ಇಂಕ್, ಬೆಂಗಳೂರು

**ಪ್ರತಿಗಳು ದೊರೆಯುತ್ತವೆ:**

ಆರ್.ಸುಧೀಂದ್ರ ಕುಮಾರ್
# 9, 20ನೆಯ ಮೈನ್, 3ನೆಯ ಕ್ರಾಸ್
ವಿಜಯನಗರ 2ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮೈಸೂರು–570017
ಮೊ. 8892626269

ಪ್ರಿಂಟರ್ ಹೆಸರು : ಟೆಕ್‌ಫಿಜ್ ಇಂಕ್, ಬೆಂಗಳೂರು

# ನನ್ನ ನುಡಿ

ರವೀಂದ್ರನಾಥ ಠಾಕೂರ್ ಅವರ ಕವನ ಸಂಕಲನಗಳಿಂದ ಆಯ್ದು ಹದಿನಾರು ಕವನಗಳನ್ನು ಓದುಗರ ಗಮನಕ್ಕೆ ತರಬೇಕೆಂಬ ಆಸೆಯಾಯಿತು. ಠಾಕೂರ್ ಅವರ ಕವನಗಳನ್ನು ಮೊದಲ ಬಾರಿ ಓದುವವರಿಗೆ ನೆರವಾಗಲೆಂಬ ಉದ್ದೇಶದಿಂದ ಕವನದಲ್ಲಿ ಜತೆಗೂಡಿರುವ ಪದಗಳನ್ನು ಬಿಡಿಸಿ ಬರೆದು, ಪದಗಳಿಗೆ ತಿರುಳನ್ನು ತಿಳಿಸಿ, ಕವನದಲ್ಲಿ ನಿರೂಪಣೆಗೊಂಡಿರುವ ಸಂಗತಿಗಳನ್ನು ವಿವರಿಸಿದ್ದೇನೆ. ಗುರುಗಳಾದ ಕೆ.ವಿ.ನಾರಾಯಣ ಅವರು ಈ ಬರಹವನ್ನು ನೋಡಿ 'ಹೊಸ ತಲೆಮಾರಿನ ಓದುಗರಿಗೆ ಈ ರೀತಿಯ ಬರಹ ಉಪಯೋಗಕ್ಕೆ ಬರಬಹುದು' ಎಂದು ಹೇಳಿ, ನನ್ನ ಬರವಣಿಗೆಗೆ ಮಾರ್ಗದರ್ಶನ ನೀಡಿದ್ದಾರೆ.

ಈ ಹದಿನಾರು ಕವನಗಳ ಬರಹಗಳು ಅಂತರ್ ಜಾಲದಲ್ಲಿ ಪ್ರಕಟಗೊಳ್ಳುವ ಹೊನಲು ಮಿಂದಾಣದಲ್ಲಿ (honalu.net) ಪ್ರಕಟಗೊಂಡಿವೆ. ಪ್ರಕಟಣೆ ಮಾಡಿದ ಹೊನಲು ಮಿಂದಾಣದ ಸಂಪಾದಕ ವರ್ಗದವರು ಮತ್ತು ಓದುಗರು ಈ ಬರಹಗಳಿಗೆ ಉತ್ತೇಜನ ನೀಡಿದ್ದಾರೆ.

ಈ ಬರಹದ ಕರಡು ಪ್ರತಿಯನ್ನು ಓದಿದ ನನ್ನ ಗುರುಹಿರಿಯರು ಮತ್ತು ಗೆಳೆಯರು ಮೆಚ್ಚುಗೆಯ ನುಡಿಗಳನ್ನಾಡಿದ್ದಾರೆ. ನನ್ನೆಲ್ಲಾ ಬರಹದ ಮೊದಲ ಓದುಗಳಾಗಿ ನನ್ನ ಹೆಂಡತಿ ಗಾಯತ್ರಿ ತನ್ನ ಅನಿಸಿಕೆಗಳನ್ನು ತಿಳಿಸಿದ್ದಾಳೆ.

ಕವನಗಳನ್ನು ಈ ಕೆಳಕಂಡ ಮೂರು ಕೃತಿಗಳಿಂದ ಆಯ್ದುಕೊಂಡಿದ್ದೇನೆ.

೧. ಜಿ.ರಾಮನಾಥ ಭಟ್ (ಅನುವಾದಕರು): ರವೀಂದ್ರ ಕಾವ್ಯ ಸಂಚಯ

೨. ಜೆ.ರಾಮಲಿಂಗೇಗೌಡ (ಅನುವಾದಕರು): ಗುರುದೇವ ರವೀಂದ್ರ ಗೀತಾಂಜಲಿ

೩. ಕುವೆಂಪು (ಅನುವಾದಕರು): ಕುಟೀಚಕ ಕವನ ಸಂಕಲನ

ರವೀಂದ್ರನಾಥ ಠಾಕೂರ್ ಅವರ ಕವನಗಳ ಓದಿಗೆ ನೆರವಾದ ಗುರು ಹಿರಿಯರಿಗೆ, ಗೆಳೆಯರಿಗೆ, ಅನುವಾದಕರಿಗೆ ಮತ್ತು ಸಂಪಾದಕ ವರ್ಗದವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

**ಸಿ. ಪಿ.ನಾಗರಾಜ**

ಬೆಂಗಳೂರು

# ಕವನಗಳ ಓದಿಗೆ ನೆರವಾದ ಪುಸ್ತಕಗಳು


೧. ಜಿ.ರಾಮನಾಥ ಭಟ್ (ಅನುವಾದಕರು):
**ರವೀಂದ್ರ ಕಾವ್ಯ ಸಂಚಯ**
**ಗುರುದೇವ ರವೀಂದ್ರನಾಥ ಠಾಕೂರರ ಕಾವ್ಯ ಕೃತಿಗಳು**
ಗೀತಾ ಬುಕ್ ಹೌಸ್: ಪ್ರಕಾಶಕರು
ಮೈಸೂರು–೫೭೦೦೦೧
ಪ್ರಕಟಣೆ:೨೦೧೪

೨. ಜೆ.ರಾಮಲಿಂಗೇಗೌಡ (ಅನುವಾದಕರು)
**ಗುರುದೇವ ರವೀಂದ್ರರ ಗೀತಾಂಜಲಿ**
ಹನ್ಯಾಳು ಪ್ರಕಾಶನ, ೪ನೇ ಹಂತ, ವಿಜಯನಗರ
ಮೈಸೂರು–೫೭೦೦೩೨
ಪ್ರಕಟಣೆ: ೨೦೨೦

೩. ಕುವೆಂಪು (ಅನುವಾದಕರು)
**ಕುಟೀಚಕ ಕವನ ಸಂಕಲನ**
ಸಂಯೋಜಕ ಸಂಪಾದಕ: ಡಾ.ಕೆ.ಸಿ. ಶಿವಾರೆಡ್ಡಿ
ಕುವೆಂಪು ಸಮಗ್ರ ಕಾವ್ಯ–ಸಂಪುಟ–೧
ಕುವೆಂಪು ಸಮಗ್ರ ಕಾವ್ಯ–ಸಂಪುಟ–೨
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ–೫೮೩೨೭೬
ಪ್ರಕಟಣೆ: ೨೦೦೦

# ಪರಿವಿಡಿ

# ರವೀಂದ್ರನಾಥ ಠಾಕೂರ್

**ಜನನ** : ೭ನೇ ಮೇ, ೧೮೬೧

**ಮರಣ** : ೭ನೇ ಆಗಸ್ಟ್, ೧೯೪೧

**ಹುಟ್ಟಿದ ಊರು** : ಕೊಲ್ಕತ್ತ, ಪಶ್ಚಿಮ ಬಂಗಾಳ ರಾಜ್ಯ

**ತಾಯಿ** : ಶಾರದಾ ದೇವಿ

**ತಂದೆ** : ದೇಬೇಂದ್ರನಾಥ ಠಾಕೂರ್

ಕವಿ, ಕತೆಗಾರ, ನಾಟಕಕಾರ, ಕಾದಂಬರಿಕಾರ ಮತ್ತು ಕಲಾವಿದರಾಗಿ ರವೀಂದ್ರನಾಥ ಠಾಕೂರ್ ಅವರು ಬಂಗಾಳಿ ಸಾಹಿತ್ಯ ಮತ್ತು ಸಂಗೀತ ರಂಗಕ್ಕೆ ಹೊಸರೂಪವನ್ನು ಕೊಟ್ಟರು. ಕವನ, ಗೀತನಾಟಕ, ಪ್ರಬಂಧ, ಸಣ್ಣಕಥೆ, ಕಾದಂಬರಿ, ಆತ್ಮಕಥೆ, ಪ್ರವಾಸ ಕಥನವನ್ನು ಒಳಗೊಂಡಂತೆ ಬಂಗಾಳಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಅತ್ಯುತ್ತಮವಾದ ಕೃತಿಗಳನ್ನು ರಚಿಸಿದರು. ಇವರ 'ಗೀತಾಂಜಲಿ' ಕವನ ಸಂಕಲನಕ್ಕೆ ಕ್ರಿ.ಶ. ೧೯೧೩ರಲ್ಲಿ ನೊಬೆಲ್ ಸಾಹಿತ್ಯ ಪ್ರಶಸ್ತಿ ದೊರಕಿತು.

# ೧. ಅಡಿಯ ಮುಂದಿಡು

ಅಡಿಯ ಮುಂದಿಡಲು ನೀನಂಜಿಕೆಗೆ ಶರಣಾಗಿ
ನಿನ್ನ ನೀನಪಮಾನಿಸುವುದು ತರವಲ್ಲ
ನೀನಿಂದು ಭಯದಿಂದ ಮುಕ್ತನಾಗಲು ಬೇಕು
ಕೇಡಿನಾ ಭಯಕೆ ಮನನೋಯುವುದು ಸಲ್ಲ

ನೀನು ಜಾಗೃತಗೊಳಿಸು ನಿನ್ನೆಲ್ಲ ಶಕ್ತಿಯನು
ಆಪತ್ತುಗಳನು ಎದುರಿಸಿ ಗೆಲ್ಲುವುದಕೆ
ಕೇಡಿಗರನೆಲ್ಲ ನೀ ಖಂಡಿಸುವ ಪಣವ ತೊಡು
ದುರ್ಬಲರಿಗೆಲ್ಲ ರಕ್ಷಣೆ ನೀಡುವುದಕೆ

ಬಡವನೆನಬೇಡ ನೀ ಆತ್ಮಚೈತನ್ಯದಲಿ
ಕುಗ್ಗದಿರು ನೀನು ಅಸಹಾಯನೆನ್ನುತಲಿ
ಅಚಲ ನಂಬಿಕೆಯಿರಲಿ ನಿನ್ನಾತ್ಮಶಕ್ತಿಯಲಿ
ಭಯದಿಂದ ಬಿಡುಗಡೆಯ ಪಡೆವ ಛಲವಿರಲಿ

ಸಂಕಷ್ಟಮಯ ಕಠಿಣ ಸಾಹಸದ ಪಥದಲ್ಲಿ
ನಿನ್ನ ಪೌರುಷಗಾಥೆ ಶ್ರುತಗೊಳ್ಳುತಿರಲಿ.

**ವ್ಯಕ್ತಿಯು ತನ್ನ ಜೀವನದಲ್ಲಿ ಎದುರಾಗುವ ಸಂಕಟ, ಅಪಮಾನ ಮತ್ತು ಸೋಲುಗಳಿಗೆ ಹೆದರಿ ಹಿಮ್ಮೆಟ್ಟದೆ, ತನ್ನಲ್ಲಿ ತಾನು ನಂಬಿಕೆಯನ್ನಿಟ್ಟುಕೊಂಡು ಕೆಚ್ಚೆದೆಯಿಂದ ಮುನ್ನುಗ್ಗಬೇಕೆಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಅಡಿ=ಹೆಜ್ಜೆ/ಪಾದ ; ಮುಂದೆ+ಇಡಲು; ಅಡಿಯ ಮುಂದಿಡು=ಇದೊಂದು ನುಡಿಗಟ್ಟು. ಜೀವನದಲ್ಲಿ ಒಳ್ಳೆಯ ಕೆಲಸವನ್ನು ಮಾಡುವುದಕ್ಕೆ ಉತ್ಸಾಹ, ಆಸಕ್ತಿ ಮತ್ತು ಕೆಚ್ಚಿನಿಂದ ತೊಡಗುವುದು;

ನೀನ್+ಅಂಜಿಕೆಗೆ; ಅಂಜಿಕೆ=ಹೆದರಿಕೆ/ದಿಗಿಲು/ಪುಕ್ಕಲು; ಶರಣ್+ಆಗಿ;

ಶರಣು=ತಲೆಬಾಗು; ಅಂಜಿಕೆಗೆ ಶರಣಾಗಿ=ಹೆದರಿಕೆಗೆ ಗುರಿಯಾಗಿ/ಪುಕ್ಕಲುತನ ದಿಂದ ನಡುಗುತ್ತ; ನೀನ್+ಅಪಮಾನಿಸುವುದು; ಅಪಮಾನ=ವ್ಯಕ್ತಿಯ ನಡೆನುಡಿಗೆ ಕಳಂಕ ಉಂಟಾಗುವುದು/ಕೆಟ್ಟ ಹೆಸರು ಬರುವುದು; ತರ+ಅಲ್ಲ; ತರ=ರೀತಿ ; ತರವಲ್ಲ=ಸರಿಯಲ್ಲ/ಯೋಗ್ಯವಲ್ಲ;

**ಅಡಿಯ ಮುಂದಿಡಲು ನೀನಂಜಿಕೆಗೆ ಶರಣಾಗಿ ನಿನ್ನ ನೀನಪಮಾನಿಸುವುದು ತರವಲ್ಲ**=ಎಲ್ಲಿ? ಯಾವಾಗ? ಏನಾಗುವುದೋ ಎಂಬ ಹೆದರಿಕೆಯಿಂದ ನೀನು ಒಳ್ಳೆಯ ಕೆಲಸವನ್ನು ಮಾಡದೆ ಹಿಂಜರಿದರೆ, ಅದು "ನಿನ್ನನ್ನು ನೀನೇ ಕೀಳು ಮಾಡಿಕೊಂಡಂತೆ ಇಲ್ಲವೇ ಕಯ್ಯಲ್ಲಿ ಆಗದವನು" ಎಂದು ಒಪ್ಪಿಕೊಂಡಂತಾಗುತ್ತದೆ. ಜೀವನದಲ್ಲಿ ಇಂತಹ ಪುಕ್ಕಲುತನದ ನಡೆನುಡಿ ಸರಿಯಲ್ಲ;

**ನೀನ್+ಇಂದು; ಇಂದು=ಈಗ/ದಿನನಿತ್ಯದ ಬದುಕಿನಲ್ಲಿ; ಭಯ+ಇಂದ; ಭಯ**=ಹೆದರಿಕೆ/ದಿಗಿಲು; ಮುಕ್ತನ್+ಆಗಲು; ಮುಕ್ತ=ಬಿಡುಗಡೆ ಹೊಂದಿದವನು; ಭಯಮುಕ್ತ=ಹೆದರಿಕೆಯಿಲ್ಲದವನು;

**ನೀನಿಂದು ಭಯದಿಂದ ಮುಕ್ತನಾಗಲು ಬೇಕು**=ನಿತ್ಯ ಜೀವನದ ಸನ್ನಿವೇಶ ಗಳಲ್ಲಿ ಯಾವುದೇ ಬಗೆಯ ಹೆದರಿಕೆಗೂ ಒಳಗಾಗದೆ, ಕೆಚ್ಚೆದೆಯಿಂದ ಕೂಡಿರಬೇಕು;

**ಕೇಡು+ಇನ್+ಆ; ಕೇಡು**=ಅಪಾಯ/ಆಪತ್ತು/ಹಾನಿ; ಮನನೋಯುವುದು =ಮನಸ್ಸು ಸಂಕಟದಿಂದ ತತ್ತರಿಸುವುದು ; ಸಲ್ಲ=ತಕ್ಕುದಲ್ಲ/ಯೋಗ್ಯವಲ್ಲ ;

**ಕೇಡಿನಾ ಭಯಕೆ ಮನನೋಯುವುದು ಸಲ್ಲ**=ಸಾವು ನೋವು ಉಂಟಾಗು ವುದೆಂಬ ಹೆದರಿಕೆಯಿಂದ ಮನಸ್ಸನ್ನು ಗಾಸಿಗೊಳಿಸಿಕೊಳ್ಳುವುದು ಸರಿಯಲ್ಲ. ಏಕೆಂದರೆ ಹೆದರಿಕೊಂಡ ವ್ಯಕ್ತಿಯ ಮಯ್ ಮನಸ್ಸು ಪ್ರತಿ ಗಳಿಗೆಯಲ್ಲಿಯೂ ಆತಂಕದಿಂದ ತಲ್ಲಣಿಸುತ್ತ ಬಲಹೀನವಾಗುತ್ತದೆ;

ಜಾಗೃತ=ಎಚ್ಚರ/ವ್ಯಕ್ತಿಯು ತನ್ನ ಸುತ್ತಮುತ್ತ ನಡೆಯುತ್ತಿರುವುದೆಲ್ಲವನ್ನೂ ಗಮನಿಸುತ್ತಿರುವುದು; ನಿನ್ನ+ಎಲ್ಲ; ಶಕ್ತಿ=ಕಸುವು/ಬಲ; ಆಪತ್ತು=ತೊಂದರೆ/ ಅಪಾಯ ; ಎದುರಿಸು=ನೇರವಾಗಿ ಮುಂದೆ ನಿಂತು; ಗೆಲ್ಲು=ಜಯಿಸು;

**ನೀನು ಜಾಗೃತಗೊಳಿಸು ನಿನ್ನೆಲ್ಲ ಶಕ್ತಿಯನು ಆಪತ್ತುಗಳನು ಎದುರಿಸಿ ಗೆಲ್ಲುವುದಕೆ**= ಜೀವನದಲ್ಲಿ ಬರುವ ಸಂಕಟಗಳನ್ನು ಎದುರಿಸಿ ಗೆಲ್ಲುವುದಕ್ಕಾಗಿ ಅಂದರೆ ಸಂಕಟಗಳ ಪರಿಹಾರಕ್ಕಾಗಿ ನಿನ್ನ ಮಯ್ ಮನದಲ್ಲಿರುವ ಶಕ್ತಿಯೆಲ್ಲವನ್ನೂ ಒಗ್ಗೂಡಿಸು;

ಕೇಡಿಗರನ್+ಎಲ್ಲ; ಕೇಡಿಗರು=ಇತರರಿಗೆ ಕೆಟ್ಟದ್ದನ್ನೇ ಮಾಡುವವರು; ಖಂಡಿಸು=ನಿರಾಕರಿಸು; ಪಣ=ಯಾವುದೇ ಒಂದು ಕೆಲಸವನ್ನು ಮಾಡಿಯೇ

ಮುಗಿಸುತ್ತೇನೆ ಎಂಬ ನಿಲುವು ; ತೊಡು=ಹೊಂದು/ತಳೆ; ದುರ್ಬಲರಿಗೆ+ಎಲ್ಲ; ದುರ್ಬಲರು=ಅನ್ನ, ಬಟ್ಟೆ, ವಸತಿಗೆ ಗತಿಯಿಲ್ಲದ ಬಡವರು; ರಕ್ಷಣೆ= ಕಾಪಾಡುವಿಕೆ; ನೀಡು=ಕೊಡು;

**ಕೇಡಿಗರನೆಲ್ಲ ನೀ ಖಂಡಿಸುವ ಪಣವ ತೊಡು... ದುರ್ಬಲರಿಗೆಲ್ಲ ರಕ್ಷಣೆ ನೀಡುವುದಕೆ**=ದುಡಿಯುವ ವರ್ಗದ ಬಡಜನರ ಪಾಲಿಗೆ ಅನ್ನ, ಬಟ್ಟೆ, ವಸತಿ, ವಿದ್ಯೆ, ಆರೋಗ್ಯ ದೊರಕದಂತೆ ಸಮಾಜದ ಸಂಪತ್ತೆಲ್ಲವನ್ನೂ ದೋಚುತ್ತಿರುವ ಕೇಡಿಗರ ಹೀನ ಕೆಲಸಗಳನ್ನು ತಡೆಹಿಡಿಯುವ ನಿಲುವನ್ನು ತಳೆದು, ಅವರ ಎದುರಾಗಿ ಹೋರಾಡಿ ಬಡವರನ್ನು ಕಾಪಾಡಲು ಅಣಿಯಾಗು;

**ಬಡವನ್+ಎನಬೇಡ; ಬಡವ**=ಯಾವುದೇ ಬಗೆಯ ಆಸ್ತಿಯಾಗಲಿ/ ಸಂಪತ್ತಾಗಲಿ ಇಲ್ಲದವನು; ಬಡವನು ಎನಬೇಡ=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೊಂಡಿವೆ. ವ್ಯಕ್ತಿಯು ತನ್ನ ಮಯ್ ಮನದಲ್ಲಿ ಯಾವುದೇ ಬಗೆಯ ಕಸುವು ಇಲ್ಲ/ನನ್ನಿಂದ ಯಾವುದೇ ಒಳ್ಳೆಯ ಕೆಲಸ ಆಗಲಾರದು ಎಂಬ ನಿರಾಶೆಗೆ ಒಳಗಾಗಿ ಮಾನಸಿಕವಾಗಿ ಕುಗ್ಗಬೇಡ;

ಆತ್ಮ+ಚೈತನ್ಯದಲಿ; ಆತ್ಮ=ಮನಸ್ಸು; ಚೈತನ್ಯ=ಜೀವಂತಿಕೆ/ಲವಲವಿಕೆ/ ಚಟುವಟಿಕೆ;

**ಬಡವನೆನಬೇಡ ನೀ ಆತ್ಮಚೈತನ್ಯದಲಿ**=ಮಾನಸಿಕವಾಗಿ ಕುಗ್ಗಬೇಡ. ಏಕೆಂದರೆ ಮಾನಸಿಕವಾಗಿ ಕುಗ್ಗಿದರೆ, ವ್ಯಕ್ತಿಯ ಚೇತನವೇ ಅಡಗಿಹೋಗುತ್ತದೆ. ವ್ಯಕ್ತಿಯ ಕಯ್ ಕಾಲು ಬಿದ್ದು ಹೋಗುತ್ತವೆ. ವ್ಯಕ್ತಿಯು ಬದುಕಿದ್ದು ಸತ್ತಂತೆ ಆಗುತ್ತಾನೆ;

ಕುಗ್ಗು=ಕುಂದು/ಸೊರಗು; ಅಸಹಾಯನ್+ಎನ್ನುತಲಿ; ಸಹಾಯ=ನೆರವು/ ಒತ್ತಾಸೆ; ಅಸಹಾಯನ್=ಯಾರ ನೆರವು ಇಲ್ಲದವನು; ಎನ್ನುತಲಿ=ಎಂದು ಕೊಂಡು;

**ಕುಗ್ಗದಿರು ನೀನು ಅಸಹಾಯನೆನ್ನುತಲಿ**=ನನಗೆ ಯಾರ ನೆರವಾಗಲಿ... ಬೆಂಬಲ ವಾಗಲಿ ಒತ್ತಾಸೆಯಾಗಲಿ ಇಲ್ಲ. ನಾನು ಒಬ್ಬಂಟಿ ಎಂದು ಹತಾಶನಾಗಬೇಡ;

ಅಚಲ=ಅಲ್ಲಾಡದ/ಗಟ್ಟಿಯಾದ ; ನಂಬಿಕೆ+ಇರಲಿ; ನಂಬಿಕೆ=ನೆಚ್ಚು/ವಿಶ್ವಾಸ; ನಿನ್ನ+ಆತ್ಮ+ಶಕ್ತಿಯಲಿ; ಆತ್ಮಶಕ್ತಿ=ಮನಸ್ಸಿನ ಗಟ್ಟಿತನ;

**ಅಚಲ ನಂಬಿಕೆಯಿರಲಿ ನಿನ್ನಾತ್ಮಶಕ್ತಿಯಲಿ**=ಒಳಿತನ್ನು ಮಾಡಬಲ್ಲೆ... 'ಕೆಟ್ಟದ್ದನ್ನು ಎದುರಿಸಬಲ್ಲೆ' ಎಂತಹ ಸಂಕಟವನ್ನಾದರೂ ಪರಿಹರಿಸಬಲ್ಲೆ ಎಂಬ ನಂಬಿಕೆಯು ನಿನ್ನಲ್ಲಿರಲಿ;

ಬಿಡುಗಡೆ=ವಿಮೋಚನೆ/ಮುಕ್ತಿ; ಪಡೆ=ಹೊಂದು; ಥಲ+ಇರಲಿ; ಥಲ= ಗಟ್ಟಿಯಾದ ನಿಲುವು;

**ಭಯದಿಂದ ಬಿಡುಗಡೆಯ ಪಡೆವ ಥಲವಿರಲಿ**=ಎಂತಹ ಅಪಾಯಕಾರಿ ಯಾದ ಸನ್ನಿವೇಶದಲ್ಲಿಯೂ ನಾನು ಹೆದರುವುದಿಲ್ಲವೆಂಬ ಗಟ್ಟಿಯಾದ ನಿಲುವು ನಿನ್ನ ಮನದಲ್ಲಿರಲಿ. ಏಕೆಂದರೆ ವ್ಯಕ್ತಿಯು ಕೆಚ್ಚೆದೆಯಿಂದ ಇದ್ದರೆ ಎಂತಹ ಆಪತ್ತನ್ನಾದರೂ ಎದುರಿಸಿ ಗೆಲ್ಲಬಹುದು;

ಸಂಕಷ್ಟ=ತೊಂದರೆ/ತೊಡಕು/ಅಡೆತಡೆ/ಕಿರುಕುಳ/ಹಿಂಸೆ; ಮಯ=ತುಂಬಿದ/ ಕೂಡಿದ; ಕಠಿಣ=ಗಡುಸು/ಬಿರುಸು/ಕ್ರೂರವಾದುದು; ಸಾಹಸ=ಯಾವುದೇ ಕೆಲಸವನ್ನು ಮಾಡಲು ವ್ಯಕ್ತಿಯು ತನ್ನ ಶಕ್ತಿ ಮೀರಿ ಹೋರಾಡುವುದು/ ಪ್ರಯತ್ನಿಸುವುದು; ಪಥ=ದಾರಿ/ಹಾದಿ;

**ಸಂಕಷ್ಟಮಯ ಕಠಿಣ ಸಾಹಸದ ಪಥದಲ್ಲಿ**=ಬಹುಬಗೆಯ ಸಂಕಟ, ಅಪಮಾನ ಮತ್ತು ಸೋಲುಗಳಿಂದ ತುಂಬಿರುವ ಜಗದ ಜೀವನದಲ್ಲಿ ಅವೆಲ್ಲವನ್ನೂ ತೊಡೆದು ಹಾಕಲು ಹೋರಾಡುತ್ತ, ಸಾಹಸದಿಂದ ಮುನ್ನಡೆಯುತ್ತಿರುವ ದಾರಿಯಲ್ಲಿ;

ಪೌರುಷ=ಕೆಚ್ಚಿನಿಂದ ಕೂಡಿದ/ಸಾಹಸದಿಂದ ಕೂಡಿದ; ಗಾಥೆ=ಹಾಡು; ಶ್ರುತ=ಹೆಸರುವಾಸಿಯಾದ/ಕೀರ್ತಿಯನ್ನು ತರುವ;

**ನಿನ್ನ ಪೌರುಷಗಾಥೆ ಶ್ರುತಗೊಳ್ಳುತಿರಲಿ**=ಜೀವನದಲ್ಲಿ ಬರುವ ಸಂಕಟಗಳನ್ನು ಅಡಗಿಸಲು ವ್ಯಕ್ತಿಯಾಗಿ ನೀನು ಮಾಡುವ ಹೋರಾಟದ ಪ್ರಯತ್ನಗಳೆಲ್ಲವೂ, ಮಾನವನ ಮಯ್ ಮನಸ್ಸಿಗೆ ಇರುವ ಕಸುವು ಎಂತಹುದು ಎಂಬುದನ್ನು ಜಗತ್ತಿಗೆ ತಿಳಿಸುವ ಕಾವ್ಯವಾಗಿ ಜನಮನದಲ್ಲಿ ಹಬ್ಬಿ ಹೆಸರುವಾಸಿಯಾಗಲಿ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೨. ಪರಿಹಾಸಕ

ರಾಜಸಭೆಯಲಿ ಅರಸ ಕೋಪವ ತಳೆದು ಮೌನದಿ ಕುಳಿತಿರೆ
ಅವನ ದಳಪತಿ ಬಂದು ವಂದಿಸಿ ಶಿರವಿಯಲಿ ಇಂತೆಂದನು
**"ಧೂಳಿಪಟಗೊಳಿಸಿದೆನು ಹಳ್ಳಿಯ; ಗಂಡಸರು ಹತರಾದರು**
**ಅಳಲು ಹೆದರುವ ಹೆಂಗಸರು ಕತ್ತಲಲಿ ಮನೆಯೊಳಗುಳಿದರು"**

ರಾಜಗುರು ಮೇಲೆದ್ದು ನಿಲ್ಲುತ ರಾಜನನು ಬಲು ಹೊಗಳುತ
**"ನಿನಗೆ ಮಂಗಳವಾಗಲಿ"** ಎಂದನು ಅರಸನಿಗೆ ಶುಭ ಕೋರುತ
ಅಷ್ಟರಲಿ ಪರಿಹಾಸಕನು ಗಹಗಹಿಸಿ ನಕ್ಕನು ಹೆದರದೆ
ಇದನು ಕೇಳುತ ಕೆಂಪಗಾದನು ರಾಜ ಕೋಪವ ತಡೆಯದೆ

ಮಂತ್ರಿವರ್ಯನು ಅರಸನೆದುರಲಿ ತಲೆಯ ಬಾಗಿಸಿ ನುಡಿದನು
**"ರಾಜಶಕ್ತಿಗೆ ದೈವಶಕ್ತಿಯು ಕೂಡಿ ಹರಕೆಯ ನೀಡಿತು**
**ನಮ್ಮ ಸಿಂಹಾಸನದ ಘನತೆಯು ಮೇಲೆ ಗಗನಕೆ ನೆಗೆಯಿತು"**
ಅಷ್ಟರಲಿ ಪರಿಹಾಸಕನ ನಗು ಅಟ್ಟಹಾಸವ ಮುಟ್ಟಿತು

**"ನೀನು ಘನತೆಯ ಗೆರೆಯ ದಾಟಿದೆ ಇಂಥ ನಗು ತರವಲ್ಲವು"**
ಎಂದು ರಾಜನು ಗುಡುಗಿ ನುಡಿಯಲು ಬೆಚ್ಚಿದುದು ಸಭೆಯೆಲ್ಲವು
**"ಹಲವು ಹರಕೆಯ ರಕ್ಷೆ ನಿನಗಿದೆ ನಿನ್ನಲಿದೆ ಐಶ್ವರ್ಯವು"**
ಎಂದು ಪರಿಹಾಸಕನು ನುಡಿದನು **"ನನಗೆ ನಗುವುದೆ ಧರ್ಮವು"**

ರಾಜ ಗದ್ದುಗೆಯಿಂದ ಎದ್ದನು ಖಡ್ಗವನು ಹೊರ ಸೆಳೆಯುತ
**"ನಿನಗೆ ಮುಳುವಾಗುವುದು ನಿನ್ನೀ ನಗುವ ಧರ್ಮವು"** ಎನ್ನುತ
ಲೆಕ್ಕಿಸದೆ ಪರಿಹಾಸಕನು ಮೇಲೆದ್ದು ನಿಂತನು ನಗುತಲಿ
ಖಡ್ಗ ಮಿಂಚಿತು ರಕ್ತ ಚಿಮ್ಮಿತು ಉಸಿರು ನಿಂತಿತು ಕ್ಷಣದಲಿ

ರಾಜಸಭೆಯಲಿ ಮೌನ ತುಂಬಿತು ಅರೆ ಕ್ಷಣದಿ ಆತಂಕದಿ
ದೇವದೇವನ ಗಹನ ಮೌನದಿ ಕೇಳಿಸಿತು ನಗು ದೂರದಿ.

**ಆಡಳಿತದ ಗದ್ದುಗೆಯಲ್ಲಿ ಕುಳಿತಿರುವ ವ್ಯಕ್ತಿಯು ವಾಸ್ತವವನ್ನು ಅರಿಯದಿದ್ದಾಗ ಇಲ್ಲವೇ ವಾಸ್ತವವನ್ನು ಎದುರಿಸಲು ಆಗದಿದ್ದಾಗ ಅತ್ಯಂತ ಕ್ರೂರಿಯಾಗುತ್ತಾನೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

'ವಾಸ್ತವವನ್ನು ಅರಿಯುವುದು' ಎಂದರೆ ಜಗತ್ತಿನಲ್ಲಿ ನಡೆಯುತ್ತಿರುವ ಒಳಿತು ಕೆಡುಕಿನ ಕ್ರಿಯೆಗಳಿಗೆ ನಿಸರ್ಗದಲ್ಲಿನ ಆಗುಹೋಗುಗಳು ಮತ್ತು ಮಾನವ ಸಮುದಾಯದ ನಡೆನುಡಿಗಳು ಕಾರಣವೆಂಬುದನ್ನು ತಿಳಿಯುವುದು.

ರಾಜಸಭೆ=ರಾಜನ ಒಡ್ಡೋಲಗ; ಅರಸ=ರಾಜ/ದೊರೆ. ಒಂದು ಸೀಮಿತ ಪ್ರದೇಶದಲ್ಲಿ ನೆಲೆಸಿರುವ ಜನಸಮುದಾಯವನ್ನು ತನ್ನ ಸೇನಾಬಲದಿಂದ ಅಂಕೆಯಲ್ಲಿಟ್ಟುಕೊಂಡು ಆಳುವವನು; ಕೋಪ=ಸಿಟ್ಟು/ಮುನಿಸು; ತಳೆ=ಹೊಂದು; ಮೌನ=ಸುಮ್ಮನಿರುವಿಕೆ; ಕುಳಿತು+ಇರೆ; ಇರೆ=ಇರಲು; ದಳಪತಿ=ಸೇನೆಯನ್ನು ನಿಯಂತ್ರಿಸಿ ಮುನ್ನಡೆಸುವ ನೇತಾರ/ದಂಡನಾಯಕ;

ವಂದಿಸಿ=ನಮಸ್ಕರಿಸಿ; ಠೀವಿ=ಗತ್ತು; ಇಂತು+ಎಂದನು; ಇಂತು=ಈ ರೀತಿ; ಎಂದನು=ಹೇಳಿದನು; ಧೂಳಿಪಟ=ನಾಶವಾಗುವಿಕೆ/ಹಾಳಾಗುವಿಕೆ; ಧೂಳಿಪಟ ಗೊಳಿಸಿದೆನು=ಎಲ್ಲವನ್ನು ನಾಶಮಾಡಿದೆನು; ಹತರು+ಆದರು; ಹತ=ಕೊಲೆಗೆ ಈಡಾದವನು; ಹತರಾದರು=ಕೊಲೆಯಾದರು; ಅಳಲು=ಸಂಕಟಪಡಲು/ ಶೋಕಿಸಲು; ಕತ್ತಲಲಿ=ಕತ್ತಲಿನಲ್ಲಿ; ಮನೆ+ಒಳಗೆ+ಉಳಿದರು;

ರಾಜಗುರು=ರಾಜನಿಗೆ ವಿದ್ಯೆ ಬುದ್ಧಿಯನ್ನು ಕಲಿಸಿ, ಅವನ ಆಡಳಿತದ ರೀತಿನೀತಿಗಳಿಗೆ ದಾರಿದೀಪವಾಗಿರುವ ವ್ಯಕ್ತಿ; ಮೇಲೆ+ಎದ್ದು; ಬಲು=ಬಹಳವಾಗಿ/ ಹೆಚ್ಚಾಗಿ; ಹೊಗಳು=ಗುಣಗಾನ ಮಾಡು; ಮಂಗಳ=ಒಳಿತು/ಶ್ರೇಯಸ್ಸು; ಕೋರು=ಬಯಸು/ಹಾರಯಿಸು; ಅಷ್ಟರಲಿ=ಆ ಸಮಯದಲ್ಲಿ;

ಪರಿಹಾಸಕ=ಹಾಸ್ಯಗಾರ/ನಗೆಗಾರ. ರಾಜನ ಒಡ್ಡೋಲಗದಲ್ಲಿ ಕವಿಗಳು, ವಿದ್ವಾಂಸರು, ನಾಟ್ಯಗಾರರು, ಸಂಗೀತಗಾರರು, ಕಲಾವಿದರು ಇರುವಂತೆಯೇ ನಗೆಗಾರರು ಇರುತ್ತಿದ್ದರು. ನಗೆಗಾರನು ದಿಟವನ್ನು ತಿಳಿಸುವ ವ್ಯಂಗ್ಯದ ನುಡಿಗಳಿಂದ ಮತ್ತು ಮಾತಿನ ಮೋಡಿಯಿಂದ ರಾಜನ ಮನಸ್ಸನ್ನು ಉಲ್ಲಾಸಗೊಳಿಸುವ ಕಾಯಕದಲ್ಲಿ ತೊಡಗಿರುತ್ತಿದ್ದನು. ರಾಜನು ಕೆಲವೊಮ್ಮೆ ಮಾಡುವ ತಪ್ಪುಗಳನ್ನು ತನ್ನ ಹಾಸ್ಯದ ನಡೆನುಡಿಗಳ ಮೂಲಕ ಅವನಿಗೆ ಎತ್ತಿತೋರಿಸಿ, ಅಂತಹ

ತಪ್ಪುಗಳನ್ನು ರಾಜನು ಮತ್ತೆ ಮಾಡದಂತೆ ಅರಿವನ್ನು ಮೂಡಿಸಬಲ್ಲವನಾಗಿದ್ದನು. ರಾಜನಿಗೆ ಆತ್ಮೀಯ ಗೆಳೆಯನಂತೆ ಇರುತ್ತಿದ್ದನು;

ಕೆಂಪಗೆ+ಆದನು; ಕೆಂಪಗಾದನು=ಇದೊಂದು ರೂಪಕವಾಗಿ ಬಳಕೆಗೊಂಡಿದೆ. ಅಪಮಾನ ಮತ್ತು ಕೋಪದಿಂದ ಕೆರಳಿದನು; ತಡೆ=ಸಹಿಸು/ತಾಳು;

ಮಂತ್ರಿ=ಆಡಳಿತವನ್ನು ನಡೆಸುವ ರಾಜನಿಗೆ ಸೂಕ್ತವಾದ ಸಲಹೆಗಳನ್ನು ನೀಡಿ, ರಾಜನ ಅಪ್ಪಣೆಗಳನ್ನು ಕಾರ್ಯರೂಪಕ್ಕೆ ತರುವವನು; ವರ್ಯ=ಉತ್ತಮನಾದವನು; ಮಂತ್ರಿವರ್ಯ=ಮಂತ್ರಿಗಳಲ್ಲಿ ಹಿರಿಯನಾದವನು;

ಅರಸನ+ಎದುರಲಿ; ತಲೆಯ ಬಾಗಿಸಿ ನುಡಿದನು=ವಿನಯದಿಂದ ಹೇಳಿದನು;

ರಾಜಶಕ್ತಿ=ರಾಜನಾದವನು ಸೇನೆಯ ಬಲದಿಂದ ಜನಗಳನ್ನು ಹೆದರಿಸಿ ಬೆದರಿಸಿ ತನ್ನ ಅಂಕೆಯಲ್ಲಿಟ್ಟುಕೊಂಡಿರುವ ಶಕ್ತಿ. ರಾಜನ ದುರಾಡಳಿತವನ್ನು ಪ್ರಶ್ನೆ ಮಾಡುವ ಇಲ್ಲವೇ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ ಮತ್ತು ಆರೋಗ್ಯಕ್ಕಾಗಿ ಬೇಡಿಕೆಯನ್ನೊಡ್ಡುವ ಜನರ ಸೊಲ್ಲನ್ನು ತನ್ನ ಸೇನಾಬಲದಿಂದ ಅಡಗಿಸುವ ಶಕ್ತಿಯನ್ನು ರಾಜನು ಹೊಂದಿರುತ್ತಾನೆ. ರಾಜ ಮತ್ತು ರಾಜಪರಿವಾರದವರು ಮಾಡುತ್ತಿರುವ ಸುಲಿಗೆ ಮತ್ತು ದಬ್ಬಾಳಿಕೆಯ ನಿರಂಕುಶ ಆಡಳಿತಕ್ಕೆ ಎದುರಾದ ಪ್ರಜೆಗಳೆಲ್ಲ 'ದೇಶದ್ರೋಹಿಗಳು ಇಲ್ಲವೇ ರಾಜದ್ರೋಹಿಗಳು' ಎಂಬ ಆಪಾದನೆಗೆ ಗುರಿಯಾಗಿ ಸಾವುನೋವುಗಳಿಗೆ ಈಡಾಗುತ್ತಾರೆ;

ದೈವಶಕ್ತಿ=ದೇವರ ಹೆಸರಿನಲ್ಲಿ ಜನಸಮುದಾಯವನ್ನು ಮಾನಸಿಕವಾಗಿ ಹತೋಟಿಯಲ್ಲಿಟ್ಟಿರುವ ಶಕ್ತಿ. ಮಾನವರ ಹುಟ್ಟು ಬದುಕು ಸಾವುಗಳಿಗೆ ದೇವರೇ ಕಾರಣ. ಮಾನವರ ಸಿರಿತನ ಇಲ್ಲವೇ ಬಡತನಕ್ಕೆ, ಅವರು ಹಿಂದಿನ ಜನ್ಮದಲ್ಲಿ ಮಾಡಿರುವ ಪಾಪ ಪುಣ್ಯಗಳೇ ಕಾರಣ. ಹುಟ್ಟುವಾಗಲೇ ಪ್ರತಿಯೊಬ್ಬ ವ್ಯಕ್ತಿಯ ಬದುಕಿನ ಆಗುಹೋಗುಗಳ ಬಗ್ಗೆ ದೇವರು ಮೊದಲೇ ತೀರ್ಮಾನವನ್ನು ಮಾಡಿ ಏನೇನು ಆಗಬೇಕೆಂಬುದನ್ನು ವ್ಯಕ್ತಿಯ ಹಣೆಯಲ್ಲಿ ಬರೆದಿರುತ್ತಾನೆ. ಆದ್ದರಿಂದಲೇ ದೇವರ ಅಪ್ಪಣೆಯಿಲ್ಲದೆ ಈ ಜಗತ್ತಿನಲ್ಲಿ ಒಂದು ಹುಲ್ಲುಕಡ್ಡಿಯೂ ಅಲ್ಲಾಡುವುದಿಲ್ಲ. ರಾಜನು ಕಣ್ಣೆದುರಿನ ದೇವತೆ. ರಾಜನಿಗೆ ತಲೆಬಾಗಿ ನಡೆಯುವುದೇ ಪ್ರಜೆಗಳ ಕರ್ತವ್ಯ. ರಾಜನಿಗೆ ಎದುರಾಗಿ ನಡೆದರೆ ಅದು ದೇವರಿಗೆ ಎದುರಾಗಿ ನಡೆದಂತೆ ಎಂಬ ಒಳಮಿಡಿತಗಳನ್ನು ಜನಮನದಲ್ಲಿ ಬಿತ್ತಲಾಗಿದೆ. ದೇವರ ಬಗೆಗಿನ ಇಂತಹ ಸಂಗತಿಗಳಿಂದಾಗಿ ಹಸಿವು, ಬಡತನ ಮತ್ತು ಅಪಮಾನದಿಂದ ನೊಂದು ಬೆಂದು ಬಳಲುತ್ತಿರುವ ದುಡಿಯುವ ಬಡವರ್ಗದ ಜನರಲ್ಲಿ ರಾಜನ ಯಾವುದೇ ಬಗೆಯ ಅನ್ಯಾಯವನ್ನು ಪ್ರಶ್ನಿಸುವ ಎದೆಗಾರಿಕೆಯು ಇಲ್ಲವಾಗಿದೆ;

**ರಾಜಶಕ್ತಿಗೆ ದೈವಶಕ್ತಿಯು ಕೂಡಿ**=ಪ್ರಜೆಗಳು ಬಹಿರಂಗದಲ್ಲಿ ರಾಜನಿಗೆ ಮತ್ತು ಅಂತರಂಗದಲ್ಲಿ ದೇವರಿಗೆ ಅಡಿಯಾಳಾಗಿದ್ದಾರೆ. ಈ ಎರಡು ಶಕ್ತಿಗಳು ಜತೆಗೂಡಿರುವುದರಿಂದಲೇ ರಾಜನ ನಿರಂಕುಶ ಆಡಳಿತ ನಡೆಯುತ್ತಿರುತ್ತದೆ;

ಕೂಡಿ=ಜತೆ ಸೇರಿ; ಹರಕೆಯ ನೀಡಿತು=ಒಳ್ಳೆಯದನ್ನು ಫಲವನ್ನು ಕೊಟ್ಟಿತು; ಘನತೆ=ಹಿರಿಮೆ; ಗಗನ=ಆಕಾಶ/ಮುಗಿಲು; ನೆಗೆ=ಹಬ್ಬು/ಆವರಿಸು; ಅಟ್ಟಹಾಸ= ತುಂಬಾ ಹೆಚ್ಚಾಗಿ/ದೊಡ್ಡ ಪ್ರಮಾಣದಲ್ಲಿ;

**ನಗು ಅಟ್ಟಹಾಸವ ಮುಟ್ಟಿತು**=ಇನ್ನು ಜೋರಾಗಿ ನಗತೊಡಗಿದನು;

ಘನತೆ=ಹಿರಿಮೆ/ದೊಡ್ಡಸ್ತಿಕೆ; ಗೆರೆ=ಎಲ್ಲೆ/ಸೀಮೆ; ದಾಟು=ಮೀರು;

**'ಘನತೆಯ ಗೆರೆಯ ದಾಟುವುದು'** ಎಂಬುದು ಒಂದು ನುಡಿಗಟ್ಟಾಗಿ ಬಳಕೆಯಾಗಿದೆ. ಸಂಪ್ರದಾಯದ ನಡೆನುಡಿಗಳನ್ನು ಕಡೆಗಣಿಸಿ ವರ್ತಿಸುವುದು ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

ತರ+ಅಲ್ಲವು; ತರ=ರೀತಿ; ತರವಲ್ಲವು=ಈ ರೀತಿಯ ನಡವಳಿಕೆ ಸರಿಯಲ್ಲ; ಗುಡುಗಿ=ಅಬ್ಬರಿಸಿ; ಬೆಚ್ಚು=ಕಂಪಿಸು/ನಡುಗು; ಸಭೆ+ಎಲ್ಲವು; ಸಭೆಯೆಲ್ಲವು=ಒಡ್ಡೋಲಗದಲ್ಲಿದ್ದವರೆಲ್ಲರು;

ಹರಕೆ=ಆಶೀರ್ವಾದ; ರಕ್ಷೆ=ಕಾಪಾಡುವಿಕೆ; ನಿನಗೆ+ಇದೆ; ನಿನ್ನಲಿ+ಇದೆ; ಐಶ್ವರ್ಯ=ಚಿನ್ನಬೆಳ್ಳಿ ಒಡವೆ ವಸ್ತು ಆಸ್ತಿಯಿಂದ ಕೂಡಿರುವ ಸಂಪತ್ತು;

**ಹಲವು ಹರಕೆಯ ರಕ್ಷೆ ನಿನಗಿದೆ... ನಿನ್ನಲಿದೆ ಐಶ್ವರ್ಯವು**=ದುಡಿಯುವ ವರ್ಗದ ಬಡವರ ಬೆವರಹನಿಯಿಂದ ಉತ್ಪಾದನೆಗೊಂಡ ಅಪಾರವಾದ ಸಂಪತ್ತು ನಿನ್ನ ಬಳಿಯಿದೆ. ಇದರಿಂದಾಗಿ ಆಡಳಿತದ ಗದ್ದುಗೆಯಲ್ಲಿರುವ ನಿನಗೆ ಹಲವರಿಂದ ಬೆಂಬಲವಿದೆ. ನಿನ್ನ ಅಪ್ಪಣೆಯಂತೆ ಯಾವುದೇ ಮಾನವೀಯತೆಯಿಲ್ಲದೆ ಜನಗಳನ್ನು ಕೊಲ್ಲುವ ಸೊಕ್ಕಿನ ದಳಪತಿ ನಿನ್ನೊಡನೆ ಇದ್ದಾನೆ; ನಿನ್ನ ಬಳಿ ಇರುವ ರಾಜಗುರುವಿಗೆ ನಾಡಿನ ಜನಸಾಮಾನ್ಯರ ಹಿತಕ್ಕಿಂತ ಆಡಳಿತ ಗದ್ದುಗೆಯಲ್ಲಿರುವ ನಿನ್ನ ಹಿತ ದೊಡ್ಡದು. ಏಕೆಂದರೆ ಸದಾಕಾಲ ಆಡಳಿತ ಮತ್ತು ಸಂಪತ್ತು ಇರುವ ಕಡೆ ಆತ ಇರುತ್ತಾನೆ. ಮಂತ್ರಿಯಾದವನು ತನ್ನ ಉಳಿವಿಗಾಗಿ ನಿನ್ನ ತಾಳಕ್ಕೆ ತಕ್ಕಂತೆ ಕುಣಿಯುತ್ತಾನೆ. ಇವರೆಲ್ಲರ ಬೆಂಬಲದಿಂದ ನೀನು ವಾಸ್ತವವನ್ನು ಅರಿಯದೆ, ಜನರ ಸಂಕಟವೇನೆಂಬುದನ್ನು ತಿಳಿದುಕೊಳ್ಳದೆ, ನಿನ್ನ ಇಚ್ಚೆಗೆ ತಕ್ಕಂತೆ ನಡೆದುಕೊಳ್ಳುತ್ತ, ಜನಸಾಮಾನ್ಯರ ಕಗ್ಗೊಲೆಗೆ ಕಾರಣನಾಗಿರುವೆ;

**ನನಗೆ ನಗುವುದೆ ಧರ್ಮವು**=ಇದೊಂದು ರೂಪಕವಾಗಿ ಬಳಕೆಯಾಗಿದೆ. ಯಾವುದು ದಿಟವೋ ಅದನ್ನು ನಿನಗೆ ತಿಳಿಯ ಹೇಳುವುದೇ ನನ್ನ ಕರ್ತವ್ಯ. ಜನರನ್ನು ಕೊಂದು ಆನಂದದಿಂದ ಅಬ್ಬರಿಸುತ್ತಿರುವ ನಿನ್ನ ನಡೆನುಡಿಯು ಸರಿಯಲ್ಲ;

ಗದ್ದುಗೆ=ಸಿಂಹಾಸನ; ಖಡ್ಗ=ಕತ್ತಿ; ಸೆಳೆ=ಎಳೆ; ಹೊರ ಸೆಳೆಯುತ=ಕವಚದ ಒಳಗಿದ್ದ ಕತ್ತಿಯನ್ನು ಹೊರಕ್ಕೆ ಎಳೆದು; ಮುಳುವು=ಕೇಡು/ನಾಶ;

**ನಿನಗೆ ಮುಳುವಾಗುವುದು ನಿನ್ನೀ ನಗುವ ಧರ್ಮವು**=ನಿಜ ನುಡಿವ ನಿನ್ನ ಈ ಗುಣವೇ ನಿನ್ನ ಸಾವಿಗೆ ಕಾರಣವಾಗುವುದು;

ಲೆಕ್ಕಿಸದೆ=ತಿರಸ್ಕರಿಸಿ/ಕಡೆಗಣಿಸಿ; ಖಡ್ಗ ಮಿಂಚಿತು=ಕತ್ತಿಯು ವೇಗವಾಗಿ ಚಲಿಸಿತು; ರಕ್ತ ಚಿಮ್ಮಿತು=ನೆತ್ತರು ಎಲ್ಲೆಡೆ ಹಾರಿತು; ಉಸಿರು ನಿಂತಿತು=ಜೀವ ಹೋಯಿತು; ಕ್ಷಣದಲಿ=ಮರು ಗಳಿಗೆಯಲ್ಲಿ; ಅರೆ=ತುಸು;

ಅರೆ ಕ್ಷಣದಿ=ತುಸು ಸಮಯದಲ್ಲಿ; ಆತಂಕ=ಹೆದರಿಕೆ/ಚಿಂತೆ; ದೇವದೇವ= ನಿಸರ್ಗದ ರೂಪದಲ್ಲಿರುವ ದೇವರು; ಗಹನ=ಹೆಚ್ಚಿನ/ದಟ್ಟವಾದ;

**ದೇವದೇವನ ಗಹನ ಮೌನದಿ ಕೇಳಿಸಿತು ನಗು ದೂರದಿ**=ಈ ನುಡಿಗಳು ರೂಪಕವಾಗಿ ಬಳಕೆಗೊಂಡಿವೆ. ಆಡಳಿತದ ಗದ್ದುಗೆಯಲ್ಲಿರುವ ರಾಜಶಕ್ತಿಯು ಜನರನ್ನು ಬಹಿರಂಗವಾಗಿ ಹದ್ದುಬಸ್ತಿನಲ್ಲಿಟ್ಟುಕೊಂಡಿದ್ದರೆ, ದೇವರಶಕ್ತಿಯು ಜನರನ್ನು ಮಾನಸಿಕವಾಗಿ ಗುಲಾಮರನ್ನಾಗಿಸಿದೆ. ಈ ಸತ್ಯವನ್ನು/ವಾಸ್ತವವನ್ನು ಜಗತ್ತಿಗೆ ಯಾರು ತಿಳಿಸಲು ಪ್ರಯತ್ನಿಸುತ್ತಾರೆಯೋ ಅಂತಹವರು ನಿಜ ನುಡಿದ ಪರಿಹಾಸಕನಂತೆ ಬಲಿಯಾಗುತ್ತಿರುತ್ತಾರೆ.

ಆಡಳಿತ ಗದ್ದುಗೆಯಲ್ಲಿ ಕುಳಿತು ಅಪಾರವಾದ ಸಂಪತ್ತಿಗೆ ಒಡೆಯರಾದವರ ಮನದಲ್ಲಿ ಸಹಮಾನವರ ಬಗ್ಗೆ ಪ್ರೀತಿ, ಕರುಣೆ ಮತ್ತು ಗೆಳೆತನದ ಒಳಮಿಡಿತಗಳು ಇರುವುದಿಲ್ಲ. ಅವರು ತಮ್ಮ ಗದ್ದುಗೆಯ ಉಳಿವಿಗಾಗಿ ಯಾರನ್ನು ಬೇಕಾದರೂ ಬಲಿ ತೆಗೆದುಕೊಳ್ಳಲು ಹಿಂಜರಿಯುವುದಿಲ್ಲ ಎಂಬ ಕಟುಸತ್ಯವನ್ನು ಪರಿಹಾಸಕನ ನಗೆಯು ಸದಾಕಾಲ ಅನುರಣಿಸುತ್ತಿದೆ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

# ೩. ನೋವ ಗೆಲ್ಲುವೆನು

ನನ್ನ ಬಾಳಲಿ ಕೇಡು ಬಂದೆರಗಿದರೆ ದೇವ
ಆಸರೆಯ ನೀಡೆಂದು ಬೇಡೆ ನಾನಿನ್ನು
ನಿರ್ಭಯತೆಯಿಂದಲೇ ಕೇಡನೆದುರಿಪ ಶಕ್ತಿ
ನೀಡಬೇಕೆನಗೆಂದು ನನ್ನ ಮೊರೆಯಿನ್ನು

ನೋವ ಪರಿಹರಿಸೆಂದು ನಾನಿನ್ನ ಬೇಡದೆಯೆ
ನೋವ ಗೆಲ್ಲುವ ಶಕ್ತಿ ನೀಡೆನಗೆ ದೊರೆಯೆ
ಬಾಳ ಬವರದಿ ಸೆಣೆಸೆ ಮಿತ್ರರನು ಹುಡುಕದೆಯೆ
ನನ್ನ ಸಾಮರ್ಥ್ಯದಲೆ ನಂಬಿಕೆಯನಿಡುವೆ

ಭಯಕೆ ತುತ್ತಾಗಿರಲು ರಕ್ಷಕಗೆ ಮೊರೆಯಿಡದೆ
ಸಹನೆಯಿಂದಲೆ ನನ್ನ ಬಿಡುಗಡೆಯ ಪಡೆವೆ
ಹೇಡಿತನ ಬರದಂತೆ ನೀಡೆನಗೆ ವರಗಳನು
ನನ್ನ ಗೆಲುವಿಂದಲೇ ನಿನ್ನ ದಯೆ ತಿಳಿವೆ

ಆದರೂ ಒಂದೊಮ್ಮೆ ನನಗೆ ಸೋಲೊದಗಿದರೆ
ಮತಿ ನೀಡು ಹುಡುಕಲಿಕೆ ನಿನ್ನಾಸರೆ.

**ವ್ಯಕ್ತಿಯು ತನ್ನ ಜೀವನದ ಸಂಕಟಗಳ ನಿವಾರಣೆಯ ಜವಾಬ್ದಾರಿಯನ್ನು ದೇವರ ಪಾಲಿಗೆ ಒಪ್ಪಿಸದೆ, ತನ್ನ ಕ್ರಿಯಾಶೀಲತೆಯಿಂದಲೇ ಅವನ್ನು ಎದುರಿಸಿ ಪರಿಹರಿಸಿಕೊಳ್ಳುವ ಶಕ್ತಿಯನ್ನು ತನ್ನ ಮಯ್ ಮನಕ್ಕೆ ನೀಡುವಂತೆ ದೇವರನ್ನು ಕೇಳಿಕೊಳ್ಳುತ್ತಿರುವ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಬಾಳಲಿ=ಜೀವನದಲ್ಲಿ/ಬದುಕಿನಲ್ಲಿ; ಕೇಡು=ಆಪತ್ತು/ಅಪಾಯ/ಹಾನಿ; ಬಂದು+ಎರಗಿದರೆ; ಎರಗು=ಮೇಲೆ ಬೀಳು/ಆಕ್ರಮಿಸು; ದೇವ=ಜೀವನದಲ್ಲಿ ಉಂಟಾಗುವ ಕೆಡುಕನ್ನು ನಿವಾರಿಸಿ, ಒಳಿತನ್ನು ಮಾಡುವ ಶಕ್ತಿ ಇಲ್ಲವೇ ವ್ಯಕ್ತಿಯನ್ನು 'ದೇವರು' ಎಂದು ಮಾನವ ಸಮುದಾಯ ಕಲ್ಪಿಸಿಕೊಂಡಿದೆ;

ಆಸರೆ=ಆಶ್ರಯ/ಅವಲಂಬನೆ; ನೀಡು+ಎಂದು; ನೀಡು=ಕೊಡು/ದಯಪಾಲಿಸು/ಅನುಗ್ರಹಿಸು ; ಬೇಡು=ಯಾಚಿಸು/ಕೇಳು; ನಾನ್+ಇನ್ನು;

**ನನ್ನ ಬಾಳಲಿ ಕೇಡು ಬಂದೆರಗಿದರೆ ದೇವ, ಆಸರೆಯ ನೀಡೆಂದು ಬೇಡೆ ನಾನಿನ್ನು**=ಇನ್ನು ಮುಂದೆ ನನ್ನ ಜೀವನದಲ್ಲಿ ಆಪತ್ತು ಬಂದು ಎರಗಿದಾಗ, ದೇವರೇ, ನನಗೆ ಆಶ್ರಯವನ್ನು ನೀಡಿ ಕಾಪಾಡು ಎಂದು ನಿನ್ನನ್ನು ಯಾಚಿಸುವುದಿಲ್ಲ;

ನಿರ್ಭಯತೆ+ಇಂದಲೇ; ನಿರ್ಭಯತೆ=ಹೆದರಿಕೆಯಿಲ್ಲದಿರುವದು/ಕೆಚ್ಚೆದೆಯಿಂದ ಕೂಡಿರುವುದು; ಕೇಡನ್+ಎದುರಿಪ; ಎದುರಿಪ=ಇದಿರಿಸುವ; ಶಕ್ತಿ=ಬಲ/ಕಸುವು; ನೀಡಬೇಕು+ಎನಗೆ+ಎಂದು; ಮೊರೆ+ಇನ್ನು; ಮೊರೆ=ಬಿನ್ನಹ/ಅರಿಕೆ;

**ನಿರ್ಭಯತೆಯಿಂದಲೇ ಕೇಡನೆದುರಿಪ ಶಕ್ತಿ ನೀಡಬೇಕೆನಗೆಂದು ನನ್ನ ಮೊರೆಯಿನ್ನು**=ಇನ್ನು ಮುಂದೆ ಜೀವನದಲ್ಲಿ ಬರುವ ಕೇಡನ್ನು ಕೆಚ್ಚೆದೆಯಿಂದ ಎದುರಿಸಿ, ಕೇಡಿನಿಂದ ಪಾರಾಗುವ ಬಲವನ್ನು ನನ್ನ ಮಯ್ ಮನಕ್ಕೆ ನೀಡೆಂದು ಅರಿಕೆ ಮಾಡಿಕೊಳ್ಳುತ್ತೇನೆ;

ನೋವು=ಅಳಲು/ಸಂಕಟ; ಪರಿಹರಿಸು+ಎಂದು; ಪರಿಹರಿಸು=ನೀಗಿಸು/ನಿವಾರಿಸು/ಇಲ್ಲದಂತೆ ಮಾಡು; ನಾನ್+ನಿನ್ನ; ಬೇಡದೆಯೆ=ಯಾಚಿಸದೆ/ಕೇಳಿ ಕೊಳ್ಳದೆ; ಗೆಲ್ಲು=ಜಯಿಸು; ನೋವ ಗೆಲ್ಲುವ=ಕೆಡುಕನ್ನು ತೊಡೆದುಹಾಕಿ ಒಳಿತನ್ನು ಪಡೆಯುವ; ನೀಡು+ಎನಗೆ; ದೊರೆ=ದೇವರು ಜಗತ್ತಿಗೆ ಒಡೆಯನೆಂಬ ಕಲ್ಪನೆಯಿದೆ;

**ನೋವ ಪರಿಹರಿಸೆಂದು ನಾನಿನ್ನ ಬೇಡದೆಯೆ, ನೋವ ಗೆಲ್ಲುವ ಶಕ್ತಿ ನೀಡೆನಗೆ ದೊರೆಯೆ**=ಜೀವನದಲ್ಲಿ ಬಂದ ಕೇಡನ್ನು ನಿವಾರಿಸೆಂದು ದೇವರಾದ ನಿನ್ನನ್ನು ಯಾಚಿಸದೆ, ಬಂದ ಕೇಡನ್ನು ತೊಡೆದುಹಾಕಿ, ಜೀವನದಲ್ಲಿ ಒಳಿತನ್ನು ಪಡೆಯಬಲ್ಲ ಶಕ್ತಿಯನ್ನು ನನಗೆ ನೀಡು;

ಬವರ=ಕಾಳೆಗ/ಕಲಹ; ಬಾಳ ಬವರ=ಜೀವನದಲ್ಲಿ ಬಂದ ಬಹುಬಗೆಯ ಹೋರಾಟದ ಸನ್ನಿವೇಶಗಳಲ್ಲಿ; ಸೆಣಸು=ಕಾದಾಡು/ಹೋರಾಡು; ಮಿತ್ರ=ಗೆಳೆಯ/ಸ್ನೇಹಿತ; ಹುಡುಕು=ಅರಸು; ಸಾಮರ್ಥ್ಯ=ಬಲ/ಶಕ್ತಿ/ಕಸುವು; ನಂಬಿಕೆ=ನೆಚ್ಚು/ವಿಶ್ವಾಸ; ಅನ್=ಅನ್ನು;

**ಬಾಳ ಬವರದಿ ಸೆಣಸೆ ಮಿತ್ರರನು ಹುಡುಕದೆಯೆ ನನ್ನ ಸಾಮರ್ಥ್ಯದಲೆ ನಂಬಿಕೆಯ ನಿಡುವೆ**=ಜೀವನದಲ್ಲಿ ಬಂದ ಸಂಕಟಗಳ ಎದುರಿನ ಹೋರಾಟದಲ್ಲಿ ಗೆಳೆಯರ ನೆರವಿಗಾಗಿ ಕಾಯದೆ, ಮತ್ತೊಬ್ಬರು ನನ್ನನ್ನು ಕಾಪಾಡುತ್ತಾರೆ ಎಂದು ಸುಮ್ಮನಾಗದೆ, ನನ್ನ ಮಯ್ ಮನದ ಬಲದಲ್ಲಿಯೇ ನಂಬಿಕೆಯನ್ನಿಟ್ಟು ಹೋರಾಡುತ್ತೇನೆ;

ಭಯ=ಹೆದರಿಕೆ/ದಿಗಿಲು/ಪುಕ್ಕಲುತನ; ತುತ್ತು+ಆಗಿರಲು; ತುತ್ತಾಗಿರಲು=ಒಳಗಾಗಿರಲು/ಈಡಾಗಿರಲು; ರಕ್ಷಕ=ಕಾಪಾಡುವವನು/ಪಾಲಕ; ಮೊರೆ+ಇಡದೆ; ಮೊರೆಯಿಡದೆ=ಯಾಚಿಸದೆ; ಸಹನೆ+ಇಂದಲೆ;

ಸಹನೆ=ತಾಳ್ಮೆ/ಬಂದದ್ದೆಲ್ಲವನ್ನು ಗಟ್ಟಿ ಮನಸ್ಸಿನಿಂದ ತಾಳಿಕೊಳ್ಳುವುದು; ಬಿಡುಗಡೆ=ಕೊನೆ/ಅಂತ್ಯ/ಮುಕ್ತಾಯ ; ಪಡೆವೆ=ಹೊಂದುತ್ತೇನೆ ;

**ಭಯಕೆ ತುತ್ತಾಗಿರಲು ರಕ್ಷಕಗೆ ಮೊರೆಯಿಡದೆ ಸಹನೆಯಿಂದಲೆ ನನ್ನ ಬಿಡುಗಡೆಯ ಪಡೆವೆ**=ಮಾನಹಾನಿ ಇಲ್ಲವೇ ಜೀವಹಾನಿಯಂತಹ ಹೆದರಿಕೆಯ ಸನ್ನಿವೇಶಗಳು ಬಂದಾಗ, 'ನನ್ನನ್ನು ಪಾರುಮಾಡು' ಎಂದು ದೇವರಾದ ನಿನ್ನಲ್ಲಿ ಮೊರೆಯಿಡದೆ, ತಾಳ್ಮೆ ಮತ್ತು ಕೆಚ್ಚೆದೆಯಿಂದ ನಾನೇ ಅವನ್ನು ಎದುರಿಸಿ ನನ್ನ ಮಾನ ಪ್ರಾಣಗಳನ್ನು ಉಳಿಸಿಕೊಳ್ಳುತ್ತೇನೆ;

**ಹೇಡಿತನ=ಪುಕ್ಕಲುತನ; ಬರದಂತೆ=ಬರದ ಹಾಗೆ; ನೀಡು+ಎನಗೆ; ವರ=** ಅನುಗ್ರಹ/ಕೊಡುಗೆ ; ದಯೆ=ಕರುಣೆ; ತಿಳಿವೆ=ತಿಳಿಯುತ್ತೇನೆ;

**ಹೇಡಿತನ ಬರದಂತೆ ನೀಡೆನಗೆ ವರಗಳನು ನನ್ನ ಗೆಲುವಿಂದಲೇ ನಿನ್ನ ದಯೆ ತಿಳಿವೆ**=ಎಂತಹ ಸನ್ನಿವೇಶದಲ್ಲಿಯೂ ಪುಕ್ಕಲುತನದಿಂದ ಹಿಂಜರಿಯದಂತಹ ಮನೋಬಲವನ್ನು ನನಗೆ ನೀಡು. ಜೀವನದಲ್ಲಿನ ಎಡರುತೊಡರುಗಳನ್ನು ಎದುರಿಸಿ ನಿವಾರಿಸಿಕೊಂಡು ನಾನು ಪಡೆಯುವ ಗೆಲುವಿನಿಂದಲೇ ನಿನ್ನ ಕರುಣೆಯ ಸ್ವರೂಪವನ್ನು ಎಂತಹುದು ಎಂಬುದನ್ನು ಅರಿಯುತ್ತೇನೆ;

ಒಂದು+ಒಮ್ಮೆ; ಒಂದೊಮ್ಮೆ=ಒಂದು ವೇಳೆ; ಸೋಲು+ಒದಗಿದರೆ; ಸೋಲು= ನನ್ನ ಪ್ರಯತ್ನದಲ್ಲಿ ಇಲ್ಲವೇ ನನ್ನ ಹೋರಾಟದಲ್ಲಿ; ಮತಿ=ಬುದ್ಧಿ/ತಿಳುವಳಿಕೆ; ಹುಡುಕಲಿಕೆ=ಹುಡುಕುವುದಕ್ಕೆ; ನಿನ್ನ+ಆಸರೆ;

**ಆದರೂ ಒಂದೊಮ್ಮೆ ನನಗೆ ಸೋಲೊದಗಿದರೆ, ಮತಿ ನೀಡು ಹುಡುಕಲಿಕೆ ನಿನ್ನಾಸರೆ**=ಜೀವನದ ನನ್ನ ಹೋರಾಟದಲ್ಲಿ ಒಂದು ವೇಳೆ ಸೋಲು ಉಂಟಾದರೆ, ಆಗ ಗೆಲುವನ್ನು ಪಡೆಯುವುದಕ್ಕೆ ಅಗತ್ಯವಾದ ತಿಳುವಳಿಕೆಯನ್ನು ನನಗೆ ನೀಡು; ದೇವರಾದ ನೀನು ನನಗೆ ಜೀವನದಲ್ಲಿ ದಾರಿದೀಪವಾಗಿರು;

ಎಲ್ಲ ಸಂಕಟಗಳನ್ನು ಪರಿಹರಿಸುವ ಶಕ್ತಿಯೆಂದು ದೇವರನ್ನು ನಂಬಿಕೊಂಡು ವ್ಯಕ್ತಿಯು ಪರಾವಲಂಬಿಯಾಗಿ ಕಯ್ ಕಟ್ಟಿ ಕುಳಿತುಕೊಳ್ಳದೆ, ದಿಟ್ಟತನ ಮತ್ತು ಕ್ರಿಯಾಶೀಲತೆಯ ನಡೆನುಡಿಯಿಂದ ಜೀವನದಲ್ಲಿನ ಕೆಡುಕನ್ನು ತೊಡೆದುಹಾಕಿ, ಒಳಿತಿನ ಕಡೆಗೆ ಸ್ವಾವಲಂಬಿಯಾಗಿ ಮುನ್ನಡೆಯಬೇಕು. ದೇವರನ್ನು ಕಲ್ಲು, ಮಣ್ಣು, ಮರ ಮತ್ತು ಲೋಹದಿಂದ ಮಾಡಿರುವ ವಿಗ್ರಹರೂಪಿಯಾಗಿ ಕಾಣದೆ, ಮನದಲ್ಲಿ ಚೇತನವನ್ನು ಮೂಡಿಸಿ, ಬದುಕನ್ನು ಒಳ್ಳೆಯ ರೀತಿಯಲ್ಲಿ ರೂಪಿಸಿಕೊಳ್ಳಲು ನೆರವಾಗುವ ಒಂದು ಸಂಕೇತವೆಂದು ತಿಳಿಯಬೇಕು ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೪. ನರೋತ್ತಮ

ಸೇವಕನು ಬಂದು ಅರಸನ ವಂದಿಸುತ ನಿಂದು
ಒಪ್ಪಿಸಿದನಾದಿನದ ಪುರವಾರ್ತೆಗಳನು
ಕೊನೆಗವನು ಹೇಳಿದನು **"ಪ್ರಭುವೆ ಬಲು ಮುಖ್ಯವಿದು**
**ಹೇಳುವೆನು ಕೇಳು ಹೊಸ ಗುಡಿಯ ಹದನವನು**

**ವರನರೋತ್ತಮ ಪರಮಸಾಧು ದೇಗುಲದಲ್ಲಿ**
**ಕಾಲಿಡಲು ಒಪ್ಪದೆಯೆ ಧಿಕ್ಕರಿಸುತಿಹನು**
**ಗುಡಿಯ ಹೊರಗಿನ ರಾಜ ಬೀದಿಯಲೆ ಈ ಸಾಧು**
**ಭಜನೆ ಕೀರ್ತನೆಯಿಂದ ಜನರ ಸೆಳೆಯುವನು**

**ನೀ ನಿರ್ಮಿಸಿದ ದೇವಮಂದಿರದ ವೈಭವಕೆ**
**ಸಾಟಿಯಿಲ್ಲವು ಪ್ರಭುವೆ ಈ ಧರಣಿಯಲ್ಲಿ**
**ಆದರೂ ಮಂದಿರವು ಭಣಗುಡುತಲಿಹುದಿಂದು**
**ಭಕ್ತರಿಲ್ಲದೆ ಬರಿಯ ದೀನ ಸ್ಥಿತಿಯಲ್ಲಿ**

**ಜನರೆಲ್ಲ ಈ ಸಾಧುವಿನ ಸುತ್ತ ತಿರುಗುವರು**
**ಬಿಳಿತಾವರೆಯ ಜೇನುನೊಣ ಮುತ್ತುವಂತೆ**
**ತುಂಬು ಜತನದಿ ನೀನು ಹೊನ್ನ ಕಲಶದಿ ತಂದ**
**ಸವಿ ಜೇನಿನಲಿ ಯಾರ ಲಕ್ಷ್ಯವಿರದಂತೆ"**

ಹೃದಯದಲಿ ಕ್ಲೇಶ ತುಂಬಲು ಅರಸ ರಥವೇರಿ
ತೆರಳಿದನು ವರನರೋತ್ತಮನಿರುವ ಸ್ಥಳಕೆ
ಗುಡಿಯ ಹೊರಗಿನ ಬಯಲಿನಲಿ ಮರದಡಿಯಲ್ಲಿ
ಹುಲ್ಲ ಹಾಸಲಿ ಕುಳಿತ ಸಾಧುವಿನ ಬಳಿಗೆ

ಸಾಧುವಿಗೆ ವಂದಿಸುತ ಅರಸ ಹೇಳಿದ "ತಂದೆ
ನನ್ನ ಗುಡಿಯನ್ನೇಕೆ ನೀನು ತ್ಯಜಿಸಿರುವೆ?
ದೇವದೇವನ ಮಹಿಮೆ ಜಗಕೆ ಸಾರುವೆನೆಂದು
ಹೊನ್ನ ಗೋಪುರವನ್ನೆ ನಾ ನಿರ್ಮಿಸಿರುವೆ

ದೇವ ಮಹಿಮೆಯ ಬೋಧಿಸಲು ಬಯಲ ಧೂಳೇಕೆ?
ಏಕೆ ನೀ ನನ್ನ ಗುಡಿಯೊಳಗೆ ಬರಲಾರೆ?"
ಎಂದೆನಲು ಸಾಧು ಹೇಳಿದ ಮಂದಹಾಸದಲಿ
"ದೇವನಿಲ್ಲದ ನಿನ್ನ ಗುಡಿಗೆ ಬರಲಾರೆ"

ರಾಜ ಅಸಹನೆಯಿಂದ ಹುಬ್ಬುಗಂಟಿಕ್ಕಿದನು
ನೀಡಿದನು ಸಾಧುವಿಗೆ ಗುಡಿಯ ಲೆಕ್ಕವನು
"ಇಪ್ಪತ್ತು ದಶಲಕ್ಷ ಹೊನ್ನ ವರಹಗಳಿಂದ
ಈ ಭವ್ಯ ಕಲೆಯ ದೇಗುಲ ನಿರ್ಮಿಸಿಹೆನು

ಯಜ್ಞಯಾಗಗಳಿಂದ ಶಾಸ್ತ್ರೋಕ್ತ ವಿಧಿಯಿಂದ
ಪ್ರಾಣದಾವಾಹನೆಯ ಮೂರ್ತಿಯಲಿ ಮಾಡಿ
ಶಿಲ್ಪಿಗಳ ಸತ್ಕರಿಸಿ ದೇವನನು ಮೆಚ್ಚಿಸಿದೆ
ಧನಕನಕಗಳ ದಾನದಕ್ಷಿಣೆಯ ನೀಡಿ"

ಸಾಧುವೆಂದನು "ಅರಸ, ಎಲ್ಲವನು ಬಲ್ಲೆ ನಾ
ಆಗಲೇ ಕಾಳ್ಗಿಚ್ಚು ಬಂದ ನೆನಪಿದೆಯೆ?
ಹಲವು ಸಾವಿರ ಜನರ ಮನೆ ಸುಟ್ಟು ಅವರೆಲ್ಲ
ಬೀದಿ ಪಾಲಾದ ಕತೆ ನಿನಗೆ ನೆನಪಿದೆಯೆ?

ನಿನ್ನ ಅಭಯವ ಬಯಸಿ ಅವರು ಬಂದಾಕ್ಷಣದಿ
ನೀನವರ ಧಿಕ್ಕರಿಸಿ ಹಿಂದೆ ಕಳುಹಿಸಿದೆ
ನೀನಾಗ ವೈಭವದ ಯಾಗ ಯಜ್ಞಗಳಲ್ಲಿ
ಪೂಜೆ ಉತ್ಸವಗಳಲ್ಲಿ ಮಗ್ನನಾಗಿದ್ದೆ

**ಇದ ಕಂಡು ಖೇದದಿಂದಲಿ ದೇವ ಹೇಳಿದನು**
**ತನ್ನ ಪ್ರಜೆಗಳ ಕಂಬನಿಯ ಒರೆಸದಿಹನೆ!**
**ಈ ಜನಕೆ ಮನೆಗಳನು ಕಟ್ಟಲಾರದ ಅರಸ**
**ನನ್ನ ಮನೆಯನು ದರ್ಪದಿಂ ಕಟ್ಟುತಿಹನೆ?**

**ಇಂತು ಹೇಳುತ ದೇವ ಗುಡಿಯೊಳಗೆ ಹೋಗದೆಯೆ**
**ಮನೆಯಿಲ್ಲದಿಹ ದೀನ ಜನರ ನಡುವಿನಲಿ**
**ಬಯಲಿನಲಿ ಮರಗಳಡಿಯಲಿ ಬೀದಿ ಬದಿಯಲ್ಲಿ**
**ವಾಸಿಸಲು ತೊಡಗಿಹನು ಅಮಿತ ಕರುಣೆಯಲಿ**

**ಅಂದಿನಿಂದಲೆ ನಿನ್ನ ಹೊನ್ನ ಗೋಪುರವೆಲ್ಲ**
**ನೀರ ಗುಳ್ಳೆಯ ತೆರದಿ ಶೂನ್ಯವಾಗಿಹುದು**
**ನಿನ್ನ ಅಹಮಿಕೆಯ ಬಿಸಿಗಾಳಿ ಸೋಕುವುದಲ್ಲಿ**
**ಅರೆಗಳಿಗೆಯಲೆ ಮನವು ತಳಮಳಿಸುತಿಹುದು"**

ಕೆರಳಿ ಕೂಗುತ ಅರಸ ಕೋಪದಿಂದೊದರಿದನು
**"ತೊಲಗು ಸಾಧುವೆ ನನ್ನ ರಾಜ್ಯವನು ತೊರೆದು"**
ಒಂದು ಕ್ಷಣ ಅರಸನನು ನೋಡಿ ಹೊರಟನು ಸಾಧು
ನಸು ನಗುತ ಶಾಂತಭಾವದಿ ಇಂತು ನುಡಿದನು

**"ದೇವದೇವನ ನೀನು ನೂಕಿರುವ ಸ್ಥಳಕೆ**
**ತೊಲಗಿಸೆನ್ನನು ಅರಸ ಇನ್ನು ತಡವೇಕೆ?"**

**ಪ್ರಜೆಗಳ ಸಂಕಟವನ್ನು ನಿವಾರಿಸದೆ, ರಾಜ್ಯದ ಸಂಪತ್ತಿನಿಂದ ದೊಡ್ಡ ದೇಗುಲವನ್ನು ಕಟ್ಟಿಸಿ ಮೆರೆಯುವ ರಾಜನು "ಜನದ್ರೋಹಿಯೇ ಹೊರತು ಪ್ರಜೆಗಳ ಹಿತಚಿಂತಕನಲ್ಲ" ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ರಾಜ್ಯದ ಸಂಪತ್ತು=ದುಡಿಯುವ ವರ್ಗದ ಬಡಜನರ ಪರಿಶ್ರಮದಿಂದ ಉತ್ಪಾದನೆಗೊಂಡಿರುವ ದವಸಧಾನ್ಯ ಮತ್ತು ಇನ್ನಿತರ ವಸ್ತುಗಳು ಹಾಗೂ ಇವುಗಳ ಮೇಲಣ ತೆರಿಗೆಯ ಹಣದಿಂದ ತುಂಬಿರುವ ರಾಜ್ಯದ ಬೊಕ್ಕಸ;

ಸೇವಕ=ಆಳು/ಊಳಿಗದವನು; ಅರಸ=ರಾಜ/ದೊರೆ; ವಂದಿಸು= ನಮಸ್ಕರಿಸು;

ಒಪ್ಪಿಸಿದನ್+ಆ+ದಿನದ; ಒಪ್ಪಿಸಿದನು=ಹೇಳಿದನು/ವಿವರಿದನು; ಪುರವಾರ್ತೆ= ನಗರದ ಸುದ್ದಿ/ನಗರದಲ್ಲಿ ನಡೆಯುತ್ತಿರುವ ಸಂಗತಿಗಳು; ಕೊನೆಗೆ+ಅವನು;

ಪ್ರಭು=ರಾಜ; ಬಲು=ಬಹಳ/ಹೆಚ್ಚಿನ; ಮುಖ್ಯ+ಇದು; ಗುಡಿ=ದೇಗುಲ/ ದೇವಾಲಯ; ಹದನು=ಸುದ್ದಿ/ವರ್ತಮಾನ; ಗುಡಿಯ ಹದನವನು=ಗುಡಿಯಲ್ಲಿ ನಡೆಯುತ್ತಿರುವ ಸಂಗತಿಗಳನ್ನು;

ನರ+ಉತ್ತಮ; ನರ=ಮಾನವ; ಉತ್ತಮ=ಒಳ್ಳೆಯವನು;

ನರೋತ್ತಮ= ಒಳ್ಳೆಯ ನಡೆನುಡಿಯಿಂದ ಕೂಡಿದ ವ್ಯಕ್ತಿ;

ಪರಮ=ಉತ್ತಮನಾದ; ಸಾಧು=ಸಂನ್ಯಾಸಿ/ಯತಿ; ಕಾಲ್+ಇಡಲು; ಒಪ್ಪದೆಯೆ= ಸಮ್ಮತಿಸದೆ; ಧಿಕ್ಕರಿಸುತ+ಇಹನು; ಧಿಕ್ಕರಿಸು=ತಿರಸ್ಕರಿಸು; ಇಹನು= ಇರುವನು;

**ವರನರೋತ್ತಮ ಪರಮಸಾಧು ದೇಗುಲದಲ್ಲಿ ಕಾಲಿಡಲು ಒಪ್ಪದೆಯೆ ಧಿಕ್ಕರಿಸುತಿಹನು**=ಒಳ್ಳೆಯ ಗುಣವಂತನಾದ ಸಂನ್ಯಾಸಿಯು ಪುರದಲ್ಲಿನ ದೇಗುಲದೊಳಕ್ಕೆ ಕಾಲಿಡಲು ಮನಸ್ಸಿಲ್ಲದೆ, ದೇಗುಲದಿಂದ ದೂರಸರಿದಿದ್ದಾನೆ;

ರಾಜಬೀದಿ=ಅರಮನೆಗೆ ಹೋಗಿಬರುವ ದೊಡ್ಡ ಬೀದಿ; ಭಜನೆ=ದೇವರ ನಾಮವನ್ನು ಬಗೆ ಬಗೆಯ ವಾದ್ಯಗಳ ದನಿಯೊಡನೆ ಮತ್ತೆ ಮತ್ತೆ ಉಚ್ಚರಿಸು ತ್ತಿರುವುದು; ಕೀರ್ತನೆ+ಇಂದ; ಕೀರ್ತನೆ=ದೇವರ ಮಹಿಮೆಯನ್ನು ಕೊಂಡಾಡುವ ಹಾಡುಗಳನ್ನು ಹೇಳುತ್ತಿರುವುದು; ಸೆಳೆಯುವನು=ತನ್ನತ್ತ ಬರುವಂತೆ ಮಾಡಿರುವನು;

**ಗುಡಿಯ ಹೊರಗಿನ ರಾಜಬೀದಿಯಲೆ ಈ ಸಾಧು ಭಜನೆ ಕೀರ್ತನೆಯಿಂದ ಜನರ ಸೆಳೆಯುವನು**=ಗುಡಿಯ ಹೊರಗಡೆಯ ರಾಜಬೀದಿಯಲ್ಲಿ ಸಂನ್ಯಾಸಿಯು ಹಾಡುತ್ತಿರುವ ದೇವರ ಹಾಡಿನ ಮೋಡಿಗೆ ಜನರು ಒಳಗಾಗಿದ್ದಾರೆ. ಹಾಡುಗಳ ಮೂಲಕವೇ ಜನಮನದಲ್ಲಿ ಒಳ್ಳೆಯ ನಡೆನುಡಿಗಳ ಸಂಗತಿಗಳನ್ನು ಜನರಿಗೆ ಸಂನ್ಯಾಸಿಯು ಮನದಟ್ಟುಮಾಡುತ್ತಿದ್ದಾನೆ;

ನೀ=ನೀನು; ನಿರ್ಮಿಸಿದ=ಕಟ್ಟಿಸಿದ ; ವೈಭವ=ಸಿರಿವಂತಿಕೆಯಿಂದ ಕೂಡಿದ/ ಆಡಂಬರದಿಂದ ಕಂಗೊಳಿಸುತ್ತಿರುವ; ಸಾಟಿ+ಇಲ್ಲವು; ಸಾಟಿ=ಸಮಾನ/ಎಣೆ; ಧರಣಿ=ರಾಜ್ಯ/ಭೂಮಂಡಲ;

**ನೀ ನಿರ್ಮಿಸಿದ ದೇವಮಂದಿರದ ವೈಭವಕೆ ಸಾಟಿಯಿಲ್ಲವು ಪ್ರಭುವೆ ಈ ಧರಣಿಯಲ್ಲಿ**=ಪುರದಲ್ಲಿ ನೀನು ಕಟ್ಟಿಸಿರುವ ದೇವಮಂದಿರದ ಸೊಗಸಿಗೆ ಸಮಾನವಾದುದು ಈ ಜಗತ್ತಿನಲ್ಲಿಯೇ ಇಲ್ಲ ;

**ಮಂದಿರ=ದೇವಾಲಯ; ಭಣಗುಡುತಲ್**+ಇಹುದು+ಇಂದು; **ಭಣಗುಡು=**

ಜನರಿಲ್ಲದೆ ಬಿಕೋ ಎನ್ನುವುದು/ಬರಿದಾಗು; ಇಹುದು=ಇರುವುದು; ಇಂದು= ಈಗ/ಈ ದಿನಗಳಲ್ಲಿ ; ಭಕ್ತರ್+ಇಲ್ಲದೆ; ದೀನಸ್ಥಿತಿ=ಹಾಳಾದ ರೀತಿಯಲ್ಲಿ;

**ಆದರೂ ಮಂದಿರವು ಭಣಗುಡುತಲಿಹುದಿಂದು ಭಕ್ತರಿಲ್ಲದೆ ಬರಿಯ ದೀನಸ್ಥಿತಿಯಲ್ಲಿ**=ದೊಡ್ಡ ದೇಗುಲವನ್ನು ನೀನು ಕಟ್ಟಿಸಿದ್ದರೂ ದೇವರನ್ನು ಪೂಜಿಸುವ ಜನರೇ ಇಲ್ಲದೆ ದೇಗುಲವು ಪಾಳುಬಿದ್ದ ರೀತಿಯಲ್ಲಿ ಕಂಡುಬರುತ್ತಿದೆ;

**ಜನರೆಲ್ಲ ಈ ಸಾಧುವಿನ ಸುತ್ತ ತಿರುಗುವರು ಬಿಳಿ ತಾವರೆಯ ಜೇನುನೊಣ ಮುತ್ತುವಂತೆ**=ಹೂವಿನ ರಸವನ್ನು ಹೀರಲೆಂದು ಜೇನು ನೊಣಗಳು ಬಿಳಿಯ ತಾವರೆ ಹೂವನ್ನು ಮುತ್ತುವಂತೆ ಜೀವನಕ್ಕೆ ಅಗತ್ಯವಾದ ಒಲವು, ನಲಿವು ಮತ್ತು ನೆಮ್ಮದಿಯ ಸಂಗತಿಗಳನ್ನು ತಿಳಿದುಕೊಳ್ಳಲು ಜನರು ಯತಿಯನ್ನು ಸುತ್ತುವರಿದಿದ್ದಾರೆ;

ತುಂಬ=ಬಹಳ/ಹೆಚ್ಚಿನ ಪ್ರಮಾಣ; ಜತನ=ಜೋಪಾನ/ಜೋಕೆ/ಪ್ರಯತ್ನ; ಹೊನ್ನ=ಬಂಗಾರ/ಚಿನ್ನ; ಕಲಶ=ದೇವರ ಪೂಜೆಗೆಂದು ಬಳಸುವ ಚೆಂಬು; ಸವಿ=ರುಚಿಕರವಾದ; ಲಕ್ಷ್ಯ+ಇರದ+ಅಂತೆ; ಲಕ್ಷ್ಯ=ಗಮನ; ಅಂತೆ=ಹಾಗೆ; ಲಕ್ಷ್ಯವಿರದಂತೆ=ಗಮನವಿಲ್ಲದಂತೆ;

**ತುಂಬ ಜತನದಿ ನೀನು ಹೊನ್ನ ಕಲಶದಿ ತಂದ ಸವಿ ಜೇನಿನಲಿ ಯಾರ ಲಕ್ಷ್ಯವಿರದಂತೆ**=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೆ ಬಂದಿವೆ. ರಾಜ, ನೀನು ಬಂಗಾರದ ಕಲಶದಲ್ಲಿ ತುಂಬಾ ಆಸಕ್ತಿಯಿಂದ ತಂದಿದ್ದ ಸವಿಯಾದ ಜೇನಿನ ಬಗ್ಗೆ ಈಗ ನಿನ್ನ ಪ್ರಜೆಗಳಲ್ಲಿ ಯಾರೊಬ್ಬರ ಗಮನವಿಲ್ಲ. ಅಂದರೆ ನೀನು ಕಟ್ಟಿಸಿರುವ ಅದ್ದೂರಿ ಮತ್ತು ಆಡಂಬರದಿಂದ ಕಂಗೊಳಿಸುತ್ತಿರುವ ದೊಡ್ಡ ದೇಗುಲದ ಬಗ್ಗೆ ಯಾರ ಗಮನವೂ ಇಲ್ಲ. ಪ್ರಜೆಗಳೆಲ್ಲರೂ ದೇಗುಲದಿಂದ ದೂರಸರಿದಿದ್ದಾರೆ;

ಹೃದಯ=ಮನಸ್ಸು; ಕ್ಲೇಶ=ಸಂಕಟ/ಕಳವಳ; **ಹೃದಯದಲಿ ಕ್ಲೇಶ ತುಂಬಲು**= ದೇಗುಲಕ್ಕೆ ಜನರು ಬರುತ್ತಿಲ್ಲವೆಂಬ ಸುದ್ದಿಯನ್ನು ಕೇಳಿ ರಾಜನ ಮನಸ್ಸು ಕಳವಳ ಗೊಂಡು; ರಥ+ಏರಿ; ತೆರಳು=ಹೋಗು; ಸ್ಥಳ=ಜಾಗ/ನೆಲೆ; ಮರದ+ ಅಡಿಯಲ್ಲಿ; ಹುಲ್ಲಹಾಸು=ಹಚ್ಚಹಸಿರಾದ ಹುಲ್ಲಿನಿಂದ ಪಸರಿಸಿರುವ ಜಾಗ; ತಂದೆ= ಹಿರಿಯರನ್ನು ಕುರಿತು ಮಾತನಾಡಿಸುವಾಗ ಬಳಸುವ ಪದ; ತ್ಯಜಿಸು=ಬಿಡು/ತೊರೆ;

**ತಂದೆ, ನನ್ನ ಗುಡಿಯನ್ನೇಕೆ ನೀನು ತ್ಯಜಿಸಿರುವೆ**=ತಂದೆ, ನಾನು ಕಟ್ಟಿಸಿರುವ ಗುಡಿಯನ್ನೇಕೆ ನೀನು ತೊರೆದು ಬಂದಿರುವೆ;

ಮಹಿಮೆ=ಹಿರಿಮೆ/ಉನ್ನತವಾದುದು; ಸಾರುವೆನ್+ಎಂದು; ಸಾರು=ಪ್ರಕಟ ಪಡಿಸು/ಎಲ್ಲರಿಗೂ ತಿಳಿಸು; ಗೋಪುರ=ದೇಗುಲದ ಕಟ್ಟಡದಲ್ಲಿರುವ ಎತ್ತರವಾದ ಮೇಲಿನ ತುದಿ ;

**ದೇವದೇವನ ಮಹಿಮೆ ಜಗಕೆ ಸಾರುವೆನೆಂದು ಹೊನ್ನ ಗೋಪುರವನ್ನೆ ನಾ ನಿರ್ಮಿಸಿರುವೆ**=ದೇವರ ಮಹಿಮೆ ಏನೆಂಬುದನ್ನು ಇಡೀ ಜಗತ್ತಿಗೆ ತಿಳಿಸಲೆಂದು ದೇಗುಲದ ಗೋಪುರವನ್ನು ಚಿನ್ನದಿಂದಲೇ ಮಾಡಿಸಿದ್ದೇನೆ;

ಬೋಧಿಸು=ತಿಳಿಯ ಹೇಳು; ಧೂಳ್+ಏಕೆ; ಧೂಳು=ದಾರಿಯಲ್ಲಿರುವ ಮಣ್ಣಿನ ಸಣ್ಣ ಸಣ್ಣ ಕಣಗಳು;

**ದೇವ ಮಹಿಮೆಯ ಬೋಧಿಸಲು ಬಯಲ ಧೂಳೇಕೆ**=ದೇವರ ಹಿರಿಮೆಯನ್ನು ಜನರಿಗೆ ತಿಳಿಸಲು ದೂಳಿನಿಂದ ಕೂಡಿದ ಬೀದಿಯ ಬದಿಗೇಕೆ ಬಂದಿರುವೆ;

**ಏಕೆ ನೀ ನನ್ನ ಗುಡಿಯೊಳಗೆ ಬರಲಾರೆ**=ಯಾವ ಉದ್ದೇಶದಿಂದ ನೀನು ನನ್ನ ಗುಡಿಯೊಳಕ್ಕೆ ಬರುತ್ತಿಲ್ಲ;

ಎಂದು+ಎನಲು; ಮಂದಹಾಸ=ಮುಗುಳು ನಗೆ;

**ದೇವನಿಲ್ಲದ ನಿನ್ನ ಗುಡಿಗೆ ಬರಲಾರೆ**=ದೇವರಿಲ್ಲದ ನಿನ್ನ ಗುಡಿಗೆ ನಾನು ಬರುವುದಕ್ಕೆ ಆಗದು;

**ಅಸಹನೆ+ಇಂದ; ಅಸಹನೆ**=ತಾಳ್ಮೆಯನ್ನು ಕಳೆದುಕೊಂಡು; ಹುಬ್ಬುಗಂಟಿಕ್ಕು =ಮನದಲ್ಲಿ ಉಂಟಾದ ಕೋಪತಾಪವನ್ನು ಮೊಗದಲ್ಲಿ ವ್ಯಕ್ತಪಡಿಸುತ್ತ ;

**ರಾಜ ಅಸಹನೆಯಿಂದ ಹುಬ್ಬುಗಂಟಿಕ್ಕಿದನು**=ಸಂನ್ಯಾಸಿಯ ಮಾತಿನಿಂದ ಕುಪಿತನಾದ ರಾಜನ ಮೊಗದಲ್ಲಿ ಕೋಪತಾಪಗಳು ಎದ್ದು ಕಂಡವು;

ನೀಡು=ಕೊಡು; ನೀಡಿದನು=ವರದಿಯನ್ನು ಒಪ್ಪಿಸಿದನು;

**ನೀಡಿದನು ಸಾಧುವಿಗೆ ಗುಡಿಯ ಲೆಕ್ಕವನು**=ಇದೀಗ ರಾಜನು ಸಂನ್ಯಾಸಿಗೆ ಗುಡಿಯನ್ನು ಕಟ್ಟಿಸಲು ತಾನು ವೆಚ್ಚ ಮಾಡಿದ ಹಣದ ಲೆಕ್ಕವನ್ನು ಕೊಡಲು ತೊಡಗಿದನು;

ದಶ=ಹತ್ತು; ಲಕ್ಷ=ನೂರು ಸಾವಿರ; ಇಪ್ಪತ್ತು ದಶಲಕ್ಷ=ಎರಡು ಕೋಟಿ;

ವರಹ+ಗಳ್+ಇಂದ; ವರಹ=ಪ್ರಾಚೀನ ಕಾಲದಲ್ಲಿ ವ್ಯವಹಾರದಲ್ಲಿ ಬಳಕೆಯಾಗುತ್ತಿದ್ದ ಚಿನ್ನದ ನಾಣ್ಯ. 'ವರಾಹ' ಎಂದರೆ ಹಂದಿ. ಈ ಚಿನ್ನದ ನಾಣ್ಯದಲ್ಲಿ ಹಂದಿಯ ಚಿತ್ರವಿದ್ದುದರಿಂದ ನಾಣ್ಯವನ್ನು ವರಹ ಎಂದು ಕರೆಯುತ್ತಿದ್ದರು; ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೂರನೆಯದು 'ವರಾಹ ಅವತಾರ' ಎಂಬ ನಂಬಿಕೆ ಹಿಂದೂ ಜನಸಮುದಾಯದ ಮನದಲ್ಲಿದೆ; ಭವ್ಯ=ಸೊಗಸಾದುದು/ ಉನ್ನತವಾದುದು/ಅತ್ಯುತ್ತಮವಾದುದು; ಕಲೆ=ಬಣ್ಣಬಣ್ಣದ ಚಿತ್ರಗಳು/ ಕಲ್ಲಿನ ಕೆತ್ತನೆಯಿಂದ ಕೂಡಿದ ವಿಗ್ರಹಗಳು;

**ಇಪ್ಪತ್ತು ದಶಲಕ್ಷ ಹೊನ್ನ ವರಹಗಳಿಂದ ಈ ಭವ್ಯ ಕಲೆಯ ದೇಗುಲ ನಿರ್ಮಿಸಿಹೆನು**=ಎರಡು ಕೋಟಿ ಚಿನ್ನದ ವರಹಗಳನ್ನು ವೆಚ್ಚ ಮಾಡಿ ಬಣ್ಣಬಣ್ಣದ ಸೊಗಸಾದ ಚಿತ್ರಗಳು ಮತ್ತು ಮನಮೋಹಕವಾದ ವಿಗ್ರಹಗಳಿಂದ ಕೂಡಿರುವ ಕಲೆಯ ಸೊಬಗಿನ ತಾಣವಾಗಿ ದೇಗುಲವನ್ನು ನಾನು ಕಟ್ಟಿಸಿದ್ದೇನೆ ;

ಯಜ್ಞ=ಒಂದು ಬಗೆಯ ಆಚರಣೆ. ಬೆಂಕಿಯ ಕುಂಡವನ್ನು ನಿರ್ಮಿಸಿ, ಅದರಲ್ಲಿ ದವಸ, ಹಣ್ಣು, ಬಟ್ಟೆ ಮುಂತಾದ ವಸ್ತುಗಳನ್ನು ಬೆಂಕಿಗೆ ಹಾಕಿ ಮಾಡುವ ದೇವತಾ ಪೂಜೆ. ಈ ರೀತಿ ಬೆಂಕಿಗೆ ಹಾಕುವ ವಸ್ತುಗಳನ್ನು ಅಗ್ನಿದೇವನು ತೆಗೆದುಕೊಂಡು ಹೋಗಿ ದೇವಲೋಕದಲ್ಲಿರುವ ದೇವತೆಗಳಿಗೆ ಕೊಡುತ್ತಾನೆ ಎಂಬ ನಂಬಿಕೆಯು ಈ ಆಚರಣೆಯಲ್ಲಿ ತೊಡಗುವವರ ಮನದಲ್ಲಿದೆ;

ಯಾಗ=ಬೆಂಕಿಗೆ ವಸ್ತುಗಳನ್ನು ಸಲ್ಲಿಸಿ ಮಾಡುವ ಪೂಜಾ ಆಚರಣೆ; ಶಾಸ್ತ್ರ+ಉಕ್ತ; ಶಾಸ್ತ್ರ=ದೇವರನ್ನು ಪೂಜಿಸುವಾಗ ಅನುಸರಿಸಿಬೇಕಾದ ಕಟ್ಟಲೆಗಳು; ಉಕ್ತ=ಹೇಳಿದ; ವಿಧಿ+ಇಂದ; ವಿಧಿ=ನಿಯಮ/ಕಟ್ಟಲೆ/ನೇಮ; ಶಾಸ್ತ್ರೋಕ್ತ ವಿಧಿ=ಶಾಸ್ತ್ರದಲ್ಲಿ ಹೇಳಿರುವ ರೀತಿಯ ಆಚರಣೆಗಳು;

ಪ್ರಾಣದ+ಆವಾಹನೆ; ಪ್ರಾಣ=ಜೀವ; ಆವಾಹನೆ=ನೆಲೆಗೊಳಿಸುವುದು; ಮೂರ್ತಿ=ಕಲ್ಲಿನಿಂದ ಕೆತ್ತಿರುವ ದೇವರ ವಿಗ್ರಹ;

**ಪ್ರಾಣದ ಆವಾಹನೆಯ ಮೂರ್ತಿ**=ಕಲ್ಲನ್ನು ಶಿಲ್ಪಿಯು ಕೆತ್ತಿ ಮೊದಲು ದೇವರ ವಿಗ್ರಹವನ್ನು ಕಡೆಯುತ್ತಾನೆ. ಅನಂತರ ಆ ವಿಗ್ರಹವನ್ನು ದೇಗುಲಕ್ಕೆ ತಂದ ಪುರೋಹಿತರು ಯಾಗ ಕುಂಡದ ಮುಂದೆ ಕುಳಿತು ದೇವರ ಹೆಸರನ್ನು ಉಚ್ಚರಿಸುತ್ತ, ಬಹುಬಗೆಯ ಮಂತ್ರಗಳನ್ನು ಹೇಳುತ್ತ, ಜಡರೂಪಿಯಾದ ದೇವರ ಶಿಲ್ಪಕ್ಕೆ ಜೀವವನ್ನು ಆಹ್ವಾನಿಸುವುದಕ್ಕಾಗಿ ಮಾಡುವ ಆಚರಣೆ. ಇದೊಂದು ನಂಬಿಕೆಯೇ ಹೊರತು, ಯಾವ ಪ್ರಾಣವೂ ಜಡರೂಪಿಯಾದ ವಿಗ್ರಹಕ್ಕೆ ಬರುವುದಿಲ್ಲ;

ಶಿಲ್ಪಿ=ಶಿಲೆಯಲ್ಲಿ ಶಿಲ್ಪವನ್ನು ಕೆತ್ತುವವನು; ಸತ್ಕರಿಸು=ಉಪಚರಿಸು; ಧನ=ಹಣ; ಕನಕ=ಚಿನ್ನ ; ದಕ್ಷಿಣೆ=ಕಾಣಿಕೆ;

**ದೇವನನು ಮೆಚ್ಚಿಸಿದೆ**=ದೇವರು ಮೆಚ್ಚಿಕೊಳ್ಳುವಂತೆ ಪೂಜೆಯನ್ನು ಮಾಡಿ, ದೇಗುಲದಲ್ಲಿ ದೇವರನ್ನು ನೆಲೆಗೊಳಿಸಿದೆ;

ಸಾಧು+ಎಂದನು; ಬಲ್ಲೆ=ಗೊತ್ತಿದೆ/ತಿಳಿದಿದ್ದೇನೆ ; ನಾ=ನಾನು;

**ಅರಸ, ಎಲ್ಲವನು ಬಲ್ಲೆ ನಾ**=ರಾಜನೇ, ನೀನು ಯಾವ ಉದ್ದೇಶದಿಂದ ಅಪಾರವಾದ ಹಣವನ್ನು ವೆಚ್ಚಮಾಡಿ, ದೊಡ್ಡದಾದ ದೇಗುಲವನ್ನು ಕಟ್ಟಿಸಿದೆ ಎಂಬುದೆಲ್ಲವೂ ನನಗೆ ತಿಳಿದಿದೆ;

ಆಗಲೇ=ತುಂಬಾ ಹಣವನ್ನು ವೆಚ್ಚಮಾಡಿ ನೀನು ದೇಗುಲವನ್ನು ಕಟ್ಟಿಸುತ್ತಿದ್ದ ದಿನಗಳಲ್ಲಿಯೇ; ಕಾಡು+ಕಿಚ್ಚು; ಕಿಚ್ಚು=ಬೆಂಕಿ; ಕಾಳ್ಗಿಚ್ಚು=ಕಾಡೆಲ್ಲವನ್ನೂ ವ್ಯಾಪಿಸಿರುವ ಬೆಂಕಿ; ನೆನಪು=ನಡೆದ ಪ್ರಸಂಗಗಳು ಮತ್ತೆ ಮನಸ್ಸಿನಲ್ಲಿ ಮೂಡುವುದು;

**ಆಗಲೇ ಕಾಳ್ಗಿಚ್ಚು ಬಂದ ನೆನಪಿದೆಯೆ**=ಅದೇ ಸಮಯದಲ್ಲಿ ಕಾಡಿನ ಕಿಚ್ಚಿನಿಂದ ಆದ ಬೆಂಕಿ ಅನಾಹುತದ ನೆನಪಿದೆಯೇ ನಿನಗೆ;

ಅಭಯ=ಹೆದರಿಕೆಯಿಲ್ಲದಿರುವುದು; ಬಯಸಿ=ಇಚ್ಚಿಸಿ;

**ನಿನ್ನ ಅಭಯ ಬಯಸಿ**=ಇದೊಂದು ನುಡಿಗಟ್ಟಾಗಿ ಬಳಕೆಯಾಗಿದೆ. ಕಾಳ್ಗಿಚ್ಚಿನ ಬೆಂಕಿ ಅನಾಹುತದಲ್ಲಿ ಮನೆಗಳನ್ನು ಮಾತ್ರವಲ್ಲ ತಮ್ಮೆಲ್ಲಾ ಒಡವೆ ವಸ್ತುಗಳನ್ನು ಕಳೆದುಕೊಂಡು ನಿರ್ಗತಿಕರಾದ ಜನರು ರಾಜನಾದ ನಿನ್ನಿಂದ ನೆರವನ್ನು ಪಡೆಯಲೆಂದು ಹಂಬಲಿಸಿ;

ಬಂದ+ಆ+ಕ್ಷಣದಿ; ಕ್ಷಣ=ಗಳಿಗೆ/ಸಮಯ/ವೇಳೆ; ನೀನ್+ಅವರ; ಧಿಕ್ಕರಿಸಿ= ಕಡೆಗಣಿಸಿ;

**ಅವರು ಬಂದಾಕ್ಷಣದಿ ನೀನವರ ಧಿಕ್ಕರಿಸಿ ಹಿಂದೆ ಕಳುಹಿದೆ**=ಅವರು ಬಂದಾಗ ನೀನು ಅವರ ನೋವು, ಸಂಕಟ, ಯಾತನೆಯ ಮೊರೆಯನ್ನು ಕೇಳದೆ, ಅವರೆಲ್ಲರನ್ನೂ ಬರಿಗಯ್ಯಲ್ಲಿ ಹಿಂದಕ್ಕೆ ಅಟ್ಟಿದೆ;

ನೀನ್+ಆಗ; ವೈಭವ=ಸಿರಿಯನ್ನು ಮೆರೆಸುತ್ತ ಆಡಂಬರದಿಂದ ಕೂಡಿರುವುದು; ಉತ್ಸವ=ಆಚರಣೆ; ಮಗ್ನನ್+ಆಗಿದ್ದೆ; ಮಗ್ನ=ತಲ್ಲೀನ;

ಖೇದ=ದುಗುಡ/ಚಿಂತೆ;

**ಇದ ಕಂಡು ಖೇದದಿಂದಲಿ ದೇವ ಹೇಳಿದನು**=ಜೀವಂತ ಪ್ರಜೆಗಳ ಸಂಕಟದ ನಿವಾರಣೆಗೆ ಗಮನಕೊಡದೆ, ಜಡರೂಪಿಯಾದ ದೇವರ ವಿಗ್ರಹಕ್ಕೆ ಮಾಡುವ ಪೂಜೆಯ ಆಚರಣೆಗಳಲ್ಲಿ ತೊಡಗಿದ್ದ ನಿನ್ನನ್ನು ಕಂಡು ದೇವರು ಈ ರೀತಿ ಹೇಳಿದನು;

ಕಂಬನಿ=ಕಣ್ಣೀರು ; ಒರೆಸದೆ+ಇಹನೆ; ಒರೆಸು=ಸವರು/ಇಲ್ಲದಂತೆ ಮಾಡು ; ಇಹನೆ=ಇರುವವನೆ; ದರ್ಪ=ಅಹಂಕಾರ/ಸೊಕ್ಕು;

**ತನ್ನ ಪ್ರಜೆಗಳ ಕಂಬನಿಯ ಒರೆಸದಿಹನೆ! ಈ ಜನಕೆ ಮನೆಗಳನು ಕಟ್ಟಲಾರದ ಅರಸ, ನನ್ನ ಮನೆಯನು ದರ್ಪದಿಂ ಕಟ್ಟುತಿಹನೆ**=ಮನೆಗಳನ್ನು ಕಳೆದುಕೊಂಡು ಬೀದಿಪಾಲಾದ ತನ್ನ ಪ್ರಜೆಗಳ ಕಣ್ಣೀರನ್ನು ಒರೆಸದ ರಾಜ, ಬೀದಿಪಾಲಾದ ಜನರಿಗೆ ಒಂದು ಸೂರನ್ನು ಕಟ್ಟಿಕೊಡದ ರಾಜ, ಇದೇ ಸಮಯದಲ್ಲಿ ತನಗೆ ದೇವಮಂದಿರವನ್ನು ಕಟ್ಟುತ್ತಿದ್ದಾನಲ್ಲವೇ;

ಇಂತು=ಈ ರೀತಿ; ಮನೆ+ಇಲ್ಲದೆ+ಇಹ; ದೀನ ಜನರು=ಎಲ್ಲವನ್ನೂ ಕಳೆದುಕೊಂಡ ಬಡವರು; ಮರಗಳ+ಅಡಿಯಲಿ; ತೊಡಗಿ+ಇಹನು; ಅಮಿತ=ಹೆಚ್ಚಾದ/ಅಪಾರವಾದ;

ಅಂದಿನಿಂದಲೆ=ಆ ದಿನದಿಂದಲೇ; ಶೂನ್ಯ+ಆಗಿ+ಇಹುದು;

**ಅಂದಿನಿಂದಲೆ ನಿನ್ನ ಹೊನ್ನ ಗೋಪುರವೆಲ್ಲ ನೀರ ಗುಳ್ಳೆಯ ತೆರದಿ ಶೂನ್ಯವಾಗಿಹುದು**=ನೀರಿನ ಗುಳ್ಳೆಯು ಅರೆಗಳಿಗೆಯಲ್ಲಿ ಒಡೆದುಹೋದಂತೆ ನಿನ್ನ ಚಿನ್ನದ ಗೋಪುರದ ದೇಗುಲ ಈಗ ಇಲ್ಲವಾಗಿದೆ; ದೇಗುಲದಿಂದ ದೇವರು ಹೊರಬಂದಿದ್ದಾನೆ;

ಅಹಮಿಕೆ=ಸೊಕ್ಕು/ಗರ್ವ/ಅಹಂಕಾರ;

**ನಿನ್ನ ಅಹಮಿಕೆಯ ಬಿಸಿಗಾಳಿ ಸೋಕುವುದಲ್ಲಿ**=ಈಗ ಆ ದೇಗುಲದಲ್ಲಿ ನಿನ್ನ ಅಹಂಕಾರದ ಬಿಸಿಗಾಳಿಯು ಆವರಿಸಿದೆ. ಅಂದರೆ ಈಗ ಆ ದೇಗುಲದಲ್ಲಿ ದೇವರಿಲ್ಲ. ನಿನ್ನ ಅಹಂಕಾರ ಮಾತ್ರ ಕಂಡುಬರುತ್ತಿದೆ;

ಅರೆಗಳಿಗೆ=ತುಸು ಸಮಯ; ತಳಮಳಿಸುತ+ಇಹುದು; ತಳಮಳ=ಸಂಕಟ/ಕಳವಳ

**ಅರೆಗಳಿಗೆಯಲೆ ಮನವು ತಳಮಳಿಸುತಿಹುದು**=ಈಗ ದೇಗುಲಕ್ಕೆ ಹೋದವರಿಗೆ ಮೊದಲಿನ ನೆಮ್ಮದಿಯು ದೊರೆಯುವುದಿಲ್ಲ. ಮನಸ್ಸು ಸಂಕಟದಿಂದ ಒದ್ದಾಡುತ್ತದೆ. ಏಕೆಂದರೆ ಅಲ್ಲಿ ದೇವರಿಲ್ಲ. ಅರಸನಾದ ನಿನ್ನ ಅಹಂಕಾರ ಮತ್ತು ಕ್ರೂರತನದ ನಡೆನುಡಿಗಳು ಎದ್ದು ಕಾಣುತ್ತಿವೆ;

ಕೆರಳು=ಕೋಪತಾಪಗಳ ಒಳಮಿಡತಕ್ಕೆ ಒಳಗಾಗುವುದು; ಕೋಪ+ಇಂದ+ಒದರಿದನು; ಒದರು=ಕಿರುಚು/ಗರ್ಜಿಸು;

ತೊಲಗು=ಬಿಟ್ಟು ದೂರಹೋಗು/ಕಣ್ಮರೆಯಾಗು; ತೊರೆ=ಬಿಡು/ತ್ಯಜಿಸು; ಶಾಂತಭಾವ=ಕೋಪತಾಪಗಳಿಲ್ಲದೆ ಸಮಚಿತ್ತನಾಗಿ; ತೊಲಗಿಸು+ಎನ್ನನು; ಎನ್ನನು=ನನ್ನನ್ನು; ತಡ+ಏಕೆ; ತಡ=ವಿಳಂಬ;

**ದೇವದೇವನ ನೀನು ನೂಕಿರುವ ಸ್ಥಳಕೆ ತೊಲಗಿಸೆನ್ನನು ಅರಸ ಇನ್ನು ತಡವೇಕೆ**=ದೇಗುಲದಿಂದ ಹೊರಬಂದಿರುವ ದೇವರು ಈಗ ದುಡಿಯುವ ವರ್ಗದ ಬಡಜನರ ಜತೆಯಲ್ಲಿದ್ದಾನೆ. ಅಂತೆಯೇ ನನ್ನನ್ನು ಅವರ ಬಳಿ ಕಳುಹಿಸು;

ದೇವರು ಎನ್ನುವ ವ್ಯಕ್ತಿ ಇಲ್ಲವೇ ಶಕ್ತಿಯು ಮಾನವ ಸಮುದಾಯದ ಮನದಲ್ಲಿ ಮೂಡಿ ಬಂದಿರುವ ಒಂದು ಕಲ್ಪನೆಯಾಗಿದೆ. ಆದ್ದರಿಂದಲೇ ದೇವರನ್ನು ಕುರಿತ ಚಿಂತನೆಗಳು ಮತ್ತು ಆಚರಣೆಗಳು ಹಲವಾರು ಬಗೆಗಳಲ್ಲಿವೆ. ಅನ್ನ, ಬಟ್ಟೆ, ವಸತಿ,

ವಿದ್ಯೆ, ಉದ್ಯೋಗ ಮತ್ತು ಆರೋಗ್ಯದಿಂದ ವಂಚಿತರಾದ ದುಡಿಯುವ ವರ್ಗದ ಬಡಜನರು ಇವನ್ನು ಪಡೆಯುವುದಕ್ಕಾಗಿ ದೇವರನ್ನು ಪೂಜಿಸಿದರೆ, ಅಪಾರವಾದ ಸಂಪತ್ತನ್ನು ಉಳ್ಳವರು ಮತ್ತು ಆಡಳಿತದ ಗದ್ದುಗೆಯಲ್ಲಿರುವ ವ್ಯಕ್ತಿಗಳು ತಮ್ಮ ಸಂಪತ್ತನ್ನು ಮತ್ತು ಗದ್ದುಗೆಯನ್ನು ಉಳಿಸಿಕೊಂಡು ಇನ್ನೂ ಹೆಚ್ಚಿನದನ್ನು ಪಡೆಯಲು ದೇವರನ್ನು ಪೂಜಿಸುತ್ತಾರೆ. ಸಿರಿವಂತರಿಗೆ ಮತ್ತು ಆಡಳಿತಗಾರರಿಗೆ ದೇವರು ಎನ್ನುವ ವ್ಯಕ್ತಿ ಇಲ್ಲವೇ ಶಕ್ತಿಯು ತಾವು ಸಹಮಾನವರಿಗೆ ಮತ್ತು ಸಮಾಜಕ್ಕೆ ಮಾಡುತ್ತಿರುವ ವಂಚನೆಯನ್ನು ಮುಚ್ಚಿಟ್ಟುಕೊಳ್ಳಲು ಮತ್ತು ತಮ್ಮ ವಂಚನೆಯನ್ನು ಮುಂದುವರಿಸಲು ಒಂದು ಉಪಕರಣವಾಗುತ್ತದೆ.

ಆದ್ದರಿಂದಲೇ ಉಳ್ಳವರು ಮತ್ತು ಆಡಳಿತದ ಗದ್ದುಗೆಯಲ್ಲಿರುವವರು ದೊಡ್ಡ ದೊಡ್ಡ ದೇಗುಲವನ್ನು ಕಟ್ಟಿಸಿ, ದುಡಿಯುವ ವರ್ಗದ ಬಡವರಲ್ಲಿ ದೇವರ ಬಗೆಗಿನ ನಂಬಿಕೆಯನ್ನು ಹೆಚ್ಚುಮಾಡುತ್ತಾರೆ. ದುಡಿಯುವ ವರ್ಗದ ಜನರು 'ತಮ್ಮ ಹಸಿವು, ಬಡತನ ಮತ್ತು ಅಪಮಾನದ ಜೀವನಕ್ಕೆ ತಮ್ಮ ಹಣೆಯಲ್ಲಿ ದೇವರು ಬರೆದಿರುವುದೇ ಕಾರಣ'ವೆಂದು ತಿಳಿದು, ತಮ್ಮನ್ನು ವಂಚಿಸಿ ಸುಲಿಗೆ ಮಾಡುತ್ತಿರುವ ಉಳ್ಳವರ ಮತ್ತು ಆಡಳಿತಗಾರರ ಎದುರು ತಿರುಗಿಬೀಳದೆ ತೆಪ್ಪಗಾಗುತ್ತಾರೆ. ರಾಜನು ದೇಗುಲವನ್ನು ಕಟ್ಟಿಸಿದ್ದು ಇಂತಹ ಉದ್ದೇಶದಿಂದಲೇ ಹೊರತು, ದೇವರ ಬಗೆಗಿನ ಒಲವಿನಿಂದಲ್ಲ.

ಆಡಳಿತದ ಗದ್ದುಗೆಯಲ್ಲಿ ಕುಳಿತು, ಸಿರಿವಂತಿಕೆಯ ಸೊಕ್ಕಿನಿಂದ ಮೆರೆಯುತ್ತಿರುವ ವ್ಯಕ್ತಿಗಳ ಮನದಲ್ಲಿ ದುಡಿಯುವ ವರ್ಗದ ಬಡಜನರ ಬದುಕಿನ ಬಗ್ಗೆ ಕರುಣೆ, ಕಾಳಜಿ ಮತ್ತು ಹೊಣೆಗಾರಿಕೆ ಇಲ್ಲವೆಂಬುದನ್ನು ಈ ಕವನದಲ್ಲಿ ಚಿತ್ರಣಗೊಂಡಿರುವ ಸಂಗತಿಗಳು ತಿಳಿಸುತ್ತವೆ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೫. ಕವಿಯ ಆತಂಕ

ನನ್ನ ಕವಿತೆಗಳನು ನಿನಗೆ ಕಳುಹುತಿರುವೆ ಓದುಗ
ಅಚ್ಚುಮೊಳೆಗಳನು ಒತ್ತಿ ಪುಸ್ತಕದಲಿ ತುಂಬುತ
ಹಿಂಡು ಹಕ್ಕಿಗಳನು ಪಂಜರದಲಿ ತುಂಬುವಂತೆಯೆ
ಉಸಿರುಗಟ್ಟುವಂತೆ ತುಂಬಿ ರಟ್ಟು ಹೊದಿಸಿ ಕಟ್ಟುತ

ನನ್ನ ಗೀತ ಈ ಅನಂತ ವಿಶ್ವದಲ್ಲಿ ತಿರುಗುತ
ನೀಲ ಬಾನಿನಲ್ಲಿ ಚಂದ್ರತಾರೆಗಳನು ಸುತ್ತುತ
ನಲಿಯುತಿರಲು ಕೆಳಗೆ ಸೆಳೆದು ಅಚ್ಚುಕೂಟ ಚುಂಬಕ
ನೀನು ಓದಲೆಂದೆ ಇಂದು ಪ್ರಕಟವಾಯ್ತು ಪುಸ್ತಕ

ಇಂದಿನೀ ಅಶಾಂತ ಯುಗದಿ ಓಡುತಿಹರು ಮನುಜರು
ಇನಿತು ಕವಿಯ ವಾಣಿ ಕೇಳುವಂಥ ಸಮಯವಿಲ್ಲವು
ಇಂದು ಭೋಜರಾಜನಿಲ್ಲ ನಾನು ಕಾಳಿದಾಸನಲ್ಲ
ಬರಿದೆ ಹಗಲುಗನಸ ಕಂಡು ವ್ಯರ್ಥವಾಯ್ತು ಸಮಯವು

ಹೃದಯವಂತ ಓದುಗರನು ಕಂಡು ನಲ್ಮೆದೋರಲು
ಕಾವ್ಯಕನ್ನೆ ಓಡುತಿಹಳು ಬಸ್ಸು ರೈಲು ಹತ್ತಲು.

**ಕಣ್ಣ ಮುಂದಿನ ಲೋಕದಲ್ಲಿ ಕಂಡ ವಾಸ್ತವ ಸಂಗತಿಗಳಿಗೆ , ತನ್ನ ಮನದ ಕಲ್ಪನೆ ಮತ್ತು ಚಿಂತನೆಯ ಅಂಶಗಳನ್ನು ಕಲಾತ್ಮಕವಾಗಿ ಹೆಣೆದು ರಚಿಸಿರುವ ಕವಿತೆಯನ್ನು ಓದಿ ಆನಂದಿಸುವ ಓದುಗರಿಗಾಗಿ ಹಂಬಲಿಸುತ್ತಿರುವ ಕವಿಯ ಮನದ ತಳಮಳವನ್ನು ಈ ಕವನದಲ್ಲಿ ಚಿತ್ರಿಸಲಾಗಿದೆ.**

ಕವಿ=ಕಾವ್ಯವನ್ನು ರಚಿಸುವವನು; ಆತಂಕ=ತಳಮಳ/ಕಳವಳ; ಕವಿತೆ=ಕಾವ್ಯ/ಕವನ; ಓದುಗ=ಓದುವವನು; ಅಚ್ಚುಮೊಳೆ=ಅಕ್ಕರದ ರೂಪದಲ್ಲಿ ಲೋಹದಿಂದ ತಯಾರಿಸಿರುವ ಮೊಳೆಗಳು. ಇವನ್ನು ಒಂದರ ಪಕ್ಕ ಮತ್ತೊಂದನ್ನು

ಪದರೂಪದಲ್ಲಿ ಜೋಡಿಸಿ, ಕವಿಯ ಕಯ್ ಬರಹದಲ್ಲಿದ್ದ ಕವಿತೆಯನ್ನು ಪುಸ್ತಕ ರೂಪದಲ್ಲಿ ಮುದ್ರಿಸುತ್ತಿದ್ದರು; ಕಂಪ್ಯೂಟರ್ ತೆರೆಯಲ್ಲಿ ಅಕ್ಕರಗಳು ಮೂಡುವುದಕ್ಕೆ ಮುನ್ನ ಪುಸ್ತಕ ಮುದ್ರಣಕ್ಕಾಗಿ ಬಳಸುತ್ತಿದ್ದ ತಂತ್ರಜ್ಞಾನವಿದು; ಒತ್ತಿ=ಜತೆಗೂಡಿಸಿ; ಪುಸ್ತಕದಲಿ ತುಂಬುತ=ಮುದ್ರಣರೂಪದ ಪುಸ್ತಕದಲ್ಲಿ ಜೋಡಿಸಿಟ್ಟು;

**ಹಿಂಡು=ಗುಂಪು/ಸಮೂಹ; ಪಂಜರ**=ಹಕ್ಕಿಗಳನ್ನು ಒಂದೆಡೆ ಕೂಡಿಡುವುದಕ್ಕಾಗಿ ಬಳಸುವ ಉಪಕರಣ;

**ಹಿಂಡು ಹಕ್ಕಿಗಳನು ಪಂಜರದಲಿ ತುಂಬುವಂತೆಯೆ**=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೊಂಡಿವೆ. ಇಂಪಾದ ದನಿಯನ್ನು ಮಾಡುವ ನೂರಾರು ಹಕ್ಕಿಗಳನ್ನು ಒಂದು ಪಂಜರದಲ್ಲಿ ತುಂಬುವಂತೆಯೇ, ಕವಿಯು ತನ್ನ ಮನದಲ್ಲಿ ಮಿಡಿದ ಮಾನವ ಸಮುದಾಯದ ನೋವು ನಲಿವಿನ ನೂರಾರು ಬಗೆಯ ಒಳಮಿಡಿತಗಳನ್ನು ಕವನದ ರೂಪದಲ್ಲಿ ತುಂಬಿಟ್ಟಿದ್ದಾನೆ;

ಉಸಿರು+ಕಟ್ಟುವಂತೆ; ಉಸಿರು=ಪ್ರಾಣ/ಜೀವ;

**ಉಸಿರುಗಟ್ಟುವಂತೆ ತುಂಬಿ ರಟ್ಟು ಹೊದಿಸಿ ಕಟ್ಟುತ**=ಈ ನುಡಿಗಳು ರೂಪಕವಾಗಿ ಬಳಕೆಗೊಂಡಿವೆ. ಕವಿಯ ಮನದಲ್ಲಿ ಇಡಿಕಿರಿದಿದ್ದ ಒಳಮಿಡಿತಗಳೆಲ್ಲವೂ ಇದೀಗ ಪುಸ್ತಕರೂಪವನ್ನು ಪಡೆಯುತ್ತಿವೆ;

ಗೀತ=ಕವನ; ಅನಂತ=ಅಂತ್ಯವನ್ನೇ ಕಾಣದ/ಕೊನೆಗಾಣದ; ವಿಶ್ವ=ಜಗತ್ತು/ಲೋಕ/ಪ್ರಪಂಚ; ನೀಲ=ನೀಲಿಯ ಬಣ್ಣದ; ಬಾನು+ಅಲ್ಲಿ; ಬಾನು=ಆಕಾಶ/ಗಗನ; ತಾರೆ=ಚುಕ್ಕಿ; ನಲಿ=ಆನಂದಿಸು;

**ನನ್ನ ಗೀತ ಈ ಅನಂತ ವಿಶ್ವದಲ್ಲಿ ತಿರುಗುತ ನೀಲ ಬಾನಿನಲ್ಲಿ ಚಂದ್ರತಾರೆಗಳನು ಸುತ್ತುತ ನಲಿಯುತಿರಲು**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಕವಿಯ ಕವನದಲ್ಲಿ ಚಿತ್ರಣಗೊಂಡಿರುವ ಸಂಗತಿಗಳು ಜೀವಿಗಳ ಜಗತ್ತನ್ನು ಮಾತ್ರವಲ್ಲ, ಆಕಾಶಕಾಯಗಳಾದ ಚಂದ್ರ ತಾರೆಗಳೆಲ್ಲವನ್ನೂ ಒಳಗೊಂಡಿವೆ;

ಸೆಳೆ=ಜಗ್ಗು/ಎಳೆ; ಅಚ್ಚುಕೂಟ=ಮುದ್ರಣಾಲಯ; ಚುಂಬಕ=ಸೂಜಿಗಲ್ಲು/ಕಬ್ಬಿಣವನ್ನು ತನ್ನತ್ತ ಸೆಳೆದುಕೊಳ್ಳುವ ಒಂದು ಬಗೆಯ ಲೋಹ;

**ಕೆಳಗೆ ಸೆಳೆದು ಅಚ್ಚುಕೂಟ ಚುಂಬಕ ನೀನು ಓದಲೆಂದೆ ಇಂದು ಪ್ರಕಟವಾಯ್ತು ಪುಸ್ತಕ**=ಗಗನಮಂಡಲದಲ್ಲಿರುವ ಆಕಾಶಕಾಯಗಳ ಎಡೆಯಲ್ಲಿ ಹರಡಿಕೊಂಡು ನಲಿದಾಡುತ್ತಿದ್ದ ನನ್ನ ಕವಿತೆಯ ಒಳಮಿಡಿತಗಳನ್ನು ಭೂಮಂಡಲದಲ್ಲಿದ್ದ ಮುದ್ರಣಾಲಯವೆಂಬ ಸೂಜಿಗಲ್ಲು ತನ್ನತ್ತ ಸೆಳೆದು ಪುಸ್ತಕರೂಪದಲ್ಲಿ ಓದುಗರಿಗೆ ನೀಡುತ್ತಿದೆ;

ಇಂದಿನ+ಈ; ಈ=ನಮ್ಮ ಕಣ್ಣ ಮುಂದಿನ ಜಗತ್ತಿನಲ್ಲಿ; ಅಶಾಂತ=ವ್ಯಕ್ತಿಯು ಮನದಲ್ಲಿ ನೆಮ್ಮದಿಯಿಲ್ಲದೆ ತೊಳಲಾಡುತ್ತಿರುವುದು; ಯುಗ=ಕಾಲ; ಓಡುತ+ ಇಹರು; ಇಹರು=ಇರುವರು; ಮನುಜ=ಮಾನವ ಜೀವಿ;

**ಇಂದಿನೀ ಅಶಾಂತ ಯುಗದಿ ಓಡುತಿಹರು ಮನುಜರು**=ಇಂದಿನ ಕಾಲಮಾನದಲ್ಲಿ ಜೀವಿಸುತ್ತಿರುವ ವ್ಯಕ್ತಿಗಳೆಲ್ಲರೂ ಒಂದಲ್ಲ ಒಂದು ಬಗೆಯ ಮಾನಸಿಕ ಒತ್ತಡದಿಂದ ತೊಳಲಾಡುತ್ತಿದ್ದಾರೆ. ಸಿರಿವಂತರು ಇನ್ನು... ಇನ್ನು... ಇನ್ನೂ ಹೆಚ್ಚಿನ ಪ್ರಮಾಣದ ಸಂಪತ್ತನ್ನು ಕೂಡಿಡಬೇಕೆಂಬ ದುರಾಶೆಯಿಂದ ಪರಿತಪಿಸುತ್ತಿದ್ದಾರೆ, ಬಡವರು ಜೀವನಕ್ಕೆ ಅತ್ಯಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ ಮತ್ತು ಆರೋಗ್ಯವನ್ನು ಪಡೆಯಲಾಗದೆ ಒದ್ದಾಡುತ್ತಿದ್ದಾರೆ. ಇನ್ನುಳಿದವರು ಅತ್ತ ಸಿರಿವಂತಿಕೆಯ ಏಣಿಯನ್ನು ಹತ್ತಲಾಗದೆ, ಇತ್ತ ಬಡತನದ ಗುಂಡಿಗೆ ಬೀಳಬಹುದೆಂಬ ಹೆದರಿಕೆಯಿಂದ ಕಂಗಾಲಾಗಿದ್ದಾರೆ. ಈ ರೀತಿ ಪ್ರತಿಯೊಬ್ಬರ ಜೀವನದಲ್ಲಿಯೂ ನೆಮ್ಮದಿಯೆಂಬುದು ಇಲ್ಲವಾಗಿದೆ;

ಇನಿತು=ಸ್ವಲ್ಪ/ತುಸು; ವಾಣಿ=ನುಡಿ/ಮಾತು; ಕವಿಯ ವಾಣಿ=ಕವಿಯು ತನ್ನ ಕವಿತೆಯ ಮೂಲಕ ಹೇಳಿರುವ ವಿಚಾರಗಳು; ಸಮಯ+ಇಲ್ಲವು;

**ಇನಿತು ಕವಿಯ ವಾಣಿ ಕೇಳುವಂಥ ಸಮಯವಿಲ್ಲವು**=ಕವಿತೆಯನ್ನು ಓದಿ, ಕವಿತೆಯಲ್ಲಿ ಚಿತ್ರಣಗೊಂಡಿರುವ ಮಾನವ ಸಮುದಾಯದ ಬದುಕಿನ ನೋವು ನಲಿವನ್ನು , ಲೋಕದ ವಾಸ್ತವವನ್ನು ಮತ್ತು ಕವಿಕಲ್ಪಿತ ಜಗತ್ತಿನ ಸಂಗತಿಗಳನ್ನು ಸ್ವಲ್ಪವಾದರೂ ಕೇಳುವ ಆಸಕ್ತಿಯಾಗಲಿ, ತಿಳಿಯಬೇಕೆಂಬ ಕುತೂಹಲವಾಗಲಿ, ಆಸೆಯಾಗಲಿ ಇಲ್ಲವಾಗಿದೆ. ಆದ್ದರಿಂದಲೇ 'ಓದಲು ಬಿಡುವಿಲ್ಲ' ಎಂಬ ನೆಪವನ್ನು ಹೇಳಿ, ಕವಿತೆಯ ಓದಿನಿಂದ ಇಂದಿನ ಜನರು ದೂರವಾಗಿದ್ದಾರೆ;

ಭೋಜರಾಜನ್+ಇಲ್ಲ; ಕಾಳಿದಾಸನ್+ಅಲ್ಲ;

**ಇಂದು ಭೋಜರಾಜನಿಲ್ಲ ನಾನು ಕಾಳಿದಾಸನಲ್ಲ**=ಈ ನುಡಿಗಳು ಒಂದು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಇಂಡಿಯಾ ದೇಶದ ಪ್ರಾಚೀನ ಕವಿಗಳಲ್ಲಿ ಕಾಳಿದಾಸನ ಹೆಸರು ಬಹು ದೊಡ್ಡದು. ಸಂಸ್ಕೃತ ನುಡಿಯಲ್ಲಿ ಮಹಾಕವಿ ಕಾಳಿದಾಸ ರಚಿಸಿರುವ 'ಅಭಿಜ್ಞಾನ ಶಾಕುಂತಳಮ್' ನಾಟಕ ಮತ್ತು 'ಮೇಘದೂತ' ಕಾವ್ಯಗಳು ಜಗತ್ತಿನ ಎಲ್ಲೆಡೆಯಲ್ಲಿಯೂ ಓದುಗರಿಂದ ಮೆಚ್ಚುಗೆಯನ್ನು ಪಡೆದಿವೆ. ಮಹಾಕವಿ ಕಾಳಿದಾಸನು ಇದ್ದ ಕಾಲ ಮತ್ತು ಪ್ರಾಂತ್ಯಗಳ ಬಗ್ಗೆ ನಿಶ್ಚಿತವಾದ ಮಾಹಿತಿಗಳು ದೊರಕಿಲ್ಲ. ಸಾಹಿತ್ಯ ಚರಿತ್ರಕಾರರ ಊಹೆಯಂತೆ ಕಾಳಿದಾಸನ ಜೀವಿತದ ಕಾಲ ಸುಮಾರು ಕ್ರಿ.ಶ.೫ನೆಯ ಶತಮಾನ. ಕಾಳಿದಾಸನು ದಾರಾಪುರದ

ಅರಸನಾದ ಭೋಜರಾಜನ ಒಡ್ಡೋಲಗದಲ್ಲಿ ಕವಿಯಾಗಿ, ರಾಜನಿಗೆ ಆತ್ಮೀಯನಾದ ಗೆಳೆಯನಾಗಿದ್ದನು;

ಪ್ರಾಚೀನ ಕಾಲದಲ್ಲಿ ರಾಜ ಮಹಾರಾಜರಲ್ಲಿ ಹಲವರು ತಮ್ಮ ಒಡ್ಡೋಲಗದಲ್ಲಿ ಕವಿಗಳಿಗೆ ಆಶ್ರಯವನ್ನು ನೀಡಿ, ಕವಿಗಳ ಕಾವ್ಯ ರಚನೆಗೆ ಒತ್ತಾಸೆಯಾಗಿದ್ದರು. ಕವಿಯು ತಾನು ರಚಿಸಿದ ಹೊಸ ಕಾವ್ಯವನ್ನು ಒಡ್ಡೋಲಗದಲ್ಲಿ ನೆರೆದಿದ್ದ ಇತರ ಕವಿಗಳ, ವಿದ್ವಾಂಸರ ಮತ್ತು ಕಾವ್ಯಪ್ರೇಮಿಗಳ ಮುಂದೆ ಓದುತ್ತಿದ್ದನು. ಕವಿಯ ಹೊಸಕಾವ್ಯದ ರಚನೆಗೆ ಹೊಗಳಿಕೆ ಇಲ್ಲವೇ ತೆಗಳಿಕೆಯು ನೇರವಾಗಿ ದೊರೆಯುತ್ತಿತ್ತು. ಅಂತಹ ಕಾವ್ಯಪರಿಸರವು ಈಗ ತನ್ನ ಕಾಲದಲ್ಲಿ ಇಲ್ಲವೆಂದು ಕವಿಯು ಹೇಳುತ್ತಿದ್ದಾನೆ;

ಬರಿದೆ=ಸುಮ್ಮನೆ; ಹಗಲು+ಕನಸು; ಹಗುಲುಗನಸ=ಹಗಲು ಕನಸನ್ನು; ಹಗಲುಗನಸು=ಇದೊಂದು ನುಡಿಗಟ್ಟು. ವ್ಯಕ್ತಿಯು ಮುಂದಿನ ಜೀವನದ ಬಗ್ಗೆ ತನ್ನ ಮನದಲ್ಲಿಯೇ ಊಹಿಸಿಕೊಳ್ಳುವ ಒಲವು ನಲಿವು ನೆಮ್ಮದಿಯ ಸುಂದರ ಸಂಗತಿಗಳು; ವ್ಯರ್ಥ+ಆಯ್ತು; ವ್ಯರ್ಥ=ಪ್ರಯೋಜನವಿಲ್ಲದ್ದು;

**ಬರಿದೆ ಹಗಲುಗನಸ ಕಂಡು ವ್ಯರ್ಥವಾಯ್ತು ಸಮಯವು**=ಕವಿಯು ತನ್ನ ಕವಿತೆಯ ಓದಿಗೆ ಸಮಾನ ಮನಸ್ಕರಾದ ಓದುಗರು ದೊರೆಯುತ್ತಾರೆಯೋ ಇಲ್ಲವೋ ಎಂಬ ಆತಂಕಕ್ಕೆ ಒಳಗಾಗಿ, ನಿರಾಶೆಯಿಂದ ಈ ನುಡಿಗಳನ್ನಾಡಿದ್ದಾನೆ;

ಹೃದಯವಂತ=ಒಳ್ಳೆಯ ಮನಸ್ಸುಳ್ಳವನು;

**ಹೃದಯವಂತ ಓದುಗರು**=ಕವಿತೆಯ ಬಗ್ಗೆ ಅಪಾರವಾದ ಒಲವುಳ್ಳ, ಕವಿತೆಯ ಒಂದೊಂದು ನುಡಿಯನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂಬ ಹಂಬಲವುಳ್ಳ, ಕವಿತೆಯ ನುಡಿಗಳಲ್ಲಿ ಹೊರಹೊಮ್ಮುತ್ತಿರುವ ನೋವು ನಲಿವಿನ ಸಂಗತಿಗಳ ಮೂಲಕ ಮಾನವ ಸಮುದಾಯದ ಜೀವನದ ಒಳಿತು ಕೆಡುಕನ್ನು ಅರಿತುಕೊಳ್ಳ ಬೇಕು ಎಂಬ ಎಚ್ಚರವುಳ್ಳ ಮತ್ತು ಕವಿಯ ಮನಸ್ಸಿನ ಒಳಮಿಡಿತಗಳ ಜತೆಜತೆಗೆ ಸಮಾನವಾಗಿ ಮಿಡಿಯುವಂತಹ ಮನಸ್ಸುಳ್ಳ ಓದುಗರು; ಇಂತಹವರನ್ನು ಸಂಸ್ಕೃತ ನುಡಿಯಲ್ಲಿ **"ಸಹೃದಯರು ಕವಿಯ ಹೃದಯಕ್ಕೆ ಸಮಾನವಾದ ಹೃದಯವುಳ್ಳವರು ಎಂಬ ತಿರುಳಿನಲ್ಲಿ"** ಎಂದು ಕರೆಯುತ್ತಾರೆ;

**ಕಾವ್ಯಕನ್ನೆ**=ಇದೊಂದು ನುಡಿಗಟ್ಟು. ನೋಡುವವರ ಕಣ್ಮನಕ್ಕೆ ಆನಂದ ಮತ್ತು ಉತ್ಸಾಹವನ್ನು ನೀಡುವ ತರುಣಿಯ ಮಯ್ ಮನದ ಸೊಬಗಿನಂತೆ ಕಾವ್ಯದ ನುಡಿರಚನೆಯ ಸೊಬಗು ಮತ್ತು ಸಂಗತಿಯು ಓದುಗರ ಮನಕ್ಕೆ ಮುದವನ್ನು ನೀಡುವಂತಿರುತ್ತದೆ;

ನಲ್ಮೆ+ತೋರಲು; ನಲ್ಮೆ=ಪ್ರೀತಿ/ಒಲವು/ಅನುರಾಗ;

**ಹೃದಯವಂತ ಓದುಗರನು ಕಂಡು ನಲ್ಮೆದೋರಲು ಕಾವ್ಯಕನ್ನೆ ಓಡುತಿಹಳು ಬಸ್ಸು ರೈಲು ಹತ್ತಲು**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಕವಿಯ ಮನಸ್ಸಿಗೆ ಸಮಾನವಾದ ಮನಸ್ಸುಳ್ಳ ಓದುಗರನ್ನು ಅಂದರೆ ಹೇಗೆ ಕವಿಯು ಕವಿತೆಯನ್ನು ರಚಿಸುವುದಕ್ಕೆ ಮೊದಲು ಯಾವ ಯಾವ ಬಗೆಯ ವಾಸ್ತವ, ಕಲ್ಪನೆ ಮತ್ತು ಚಿಂತನೆಗಳ ಏರಿಳಿತಗಳಿಗೆ ಮಾನಸಿಕವಾಗಿ ಒಳಗಾಗಿದ್ದನೋ ಅಂತೆಯೇ ಮತ್ತೊಮ್ಮೆ ಕವಿಯಂತೆಯೇ ಕಾವ್ಯ ಪ್ರಪಂಚದಲ್ಲಿ ವಿಹರಿಸಬಲ್ಲ ಓದುಗರನ್ನು ಕಾವ್ಯಕನ್ನೆಯು ಅರಸುತ್ತ, ಅವರ ಬಳಿಸಾರಲು ಪುಸ್ತಕ ರೂಪದಲ್ಲಿ ಪಯಣಸುತ್ತಿದ್ದಾಳೆ;

ಕ್ರಿ.ಶ. ೧೯೩೦ರಲ್ಲಿ ರವೀಂದ್ರರು ಬಂಗಾಳಿ ನುಡಿಯಲ್ಲಿ ರಚಿಸಿ ಪ್ರಕಟಿಸಿದ **'ಪುನಶ್ಚ'** ಎಂಬ ಕವನ ಸಂಕಲನಕ್ಕೆ ಮುನ್ನುಡಿಯಾಗಿ **'ಕವಿಯ ಆತಂಕ'** ಎಂಬ ಈ ಕವನವನ್ನು ರಚಿಸಿದ್ದರು.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೬. ಖಗ ವಿಲಾಪ

ಸ್ವಚ್ಛಂದದಿಂದ ಹಾರುವ ಕಾನನದ ಪಕ್ಷಿ
ಒಂದು ದಿನ ಹಾರಿ ನಗರದ ಕಡೆಗೆ ಬಂತು
ಅಲ್ಲಿ ವಿಧಿವಶದಿಂದ ಪಂಜರದ ಪಕ್ಷಿಯನು
ಕಂಡು ಬಳಿಸಾರಿ ಕುಶಲವನು ಕೇಳಿತ್ತು

**"ಎನ್ನೊಲವೆ ನಾವಿಂದು ಜೊತೆಯಾಗಿ ಹಾರುತ್ತ**
**ಕಾನನದ ಮನೆ ಸೇರಿ ಬಾಳೋಣ"**ವೆನಲು
ಪಂಜರದ ಪಕ್ಷಿ ಪಿಸುಮಾತಿನಿಂ ಹೇಳಿತ್ತು
**"ಒಳಗೆ ಬಾ ಬಲು ಹಿತವು ಪಂಜರದ ಬಾಳು"**

**"ರೆಕ್ಕೆ ಬಿಚ್ಚಲು ಎಲ್ಲಿ ಸ್ಥಳವಿಹುದು ಪಂಜರದಿ?"**
ಎಂದು ಕಾಡಿನ ಹಕ್ಕಿ ಕನಿಕರವ ತೋರೆ
**"ಕುಳಿತುಕೊಳ್ಳಲು ಸ್ಥಳವ ನಾ ಕಾಣೆ ಆಗಸದಿ**
**ಅದಕೆ ಪಂಜರದಿಂದ ಹೊರಗೆ ಬರಲಾರೆ"**

ಪಂಜರದ ಪಕ್ಷಿಗಿಹ ಆತಂಕವನು ಕಂಡು
ಸ್ವಾತಂತ್ರ್ಯಪ್ರಿಯ ಪಕ್ಷಿ ದುಃಖಗೊಂಡಿತ್ತು
**"ಎನ್ನೊಲವೆ ವನದ ಸೌಂದರ್ಯವನು ಬಣ್ಣಿಸುವ**
**ಹಾಡುಗಳ ಹಾಡುವೆಯ?"** ಎಂದು ಕೇಳಿತ್ತು

**"ಕಾನನದ ಹಾಡುಗಳ ನಾನು ಮರೆತಿಹೆ ನೋಡು**
**ಕುಳಿತಿಕೋ ನನ್ನ ಬಳಿ ಈ ಪಂಜರದಲಿ**
**ಮಾನವರ ಮಾತನ್ನು ಹೇಳಿ ಕೊಡುವೆನು ನಾನು**
**ಪಂಡಿತರ ಜ್ಞಾನವನು ನಿನಗೆ ಕಲಿಸುವೆನು"**

ಪಂಜರದ ಪಕ್ಷಿ ಹೇಳಿದ ಮಾತು ಕೇಳುತ್ತ
ಕಾನನದ ಪಕ್ಷಿ ಭಯದಿಂದ ಕಂಪಿಸಿತು
**"ಹೇಳಿಕೊಟ್ಟರೆ ಕಲಿಯಲಾರೆ ನೀ ಹಾಡುಗಳ**
**ಹೊಮ್ಮಬೇಕೆದೆಯಲಿ"** ಎಂದು ಹೇಳಿತ್ತು

ಮಧುರ ಮಿಲನದ ಬಯಕೆಯಿಂದ ಈ ಪಕ್ಷಿಗಳ
ಒಲವಿನಾಸೆಯು ಬೆಳೆದು ತೀವ್ರಗೊಂಡಿತ್ತು
ಎಂದಿಗೂ ಹಾರಲಾರವು ಬಾನಿನಲಿ ಜೊತೆಗೆ
ಈ ಜೋಡಿ ವಿಧಿಯಾಟದಲ್ಲಿ ಸಿಲುಕಿತ್ತು

ಪಂಜರದ ಕಂಬಿಗಳ ಎಡೆಯಿಂದ ನೋಡುತ
ಪಕ್ಷಿಗಳು ಮೂಕವಾಗಿಯೆ ರೋದಿಸಿದವು
ಅನ್ಯೋನ್ಯವಾಗಿ ಅರಿಯಲು ತುಂಬ ಯತ್ನಿಸುತ
ತೊಳಲಾಡಿದರೂ ಮೂಡಲಿಲ್ಲ ಸಹಮತವು

ರೆಕ್ಕೆಗಳ ಬಡಿಯುತ್ತ ಹಕ್ಕಿಗಳು ಹಾಡಿದವು
**''ಎನ್ನೊಲವೆ ಸನಿಹ ಬಾ ಸನಿಹ ಬಾರೆಂದು"**
ಇದ ಕಂಡು ಕನಿಕರದಿ ಕವಿಯು ಉದ್ಗರಿಸಿದನು
**"ಇದಕೆನ್ನುವರು ಜನರು ವಿಧಿಯಾಟ"**ವೆಂದು

**"ಪಂಜರದ ಮುಚ್ಚಿರುವ ಬಾಗಿಲಿಗೆ ಹೆದರುವೆನು**
**ನಾನು ಬರಲೊಲ್ಲೆ"** ಎಂದಿತು ಕಾಡಹಕ್ಕಿ
**"ಬಲಹೀನ ರೆಕ್ಕೆಯಿಂ ಹಾರಲಾರೆನು ನಾನು"**
ಮೆಲುದನಿಯಲುಸುರಿತ್ತು ಪಂಜರದ ಪಕ್ಷಿ.

**ಕಾಡಿನ ಹಕ್ಕಿ ಮತ್ತು ಪಂಜರದ ಹಕ್ಕಿಯ ಮಾತುಕತೆಯ ರೂಪಕದ ಮೂಲಕ ಸ್ವಾತಂತ್ರ್ಯ ಮತ್ತು ದಾಸ್ಯದ ಬದುಕಿನ ಸ್ವರೂಪವನ್ನು ಈ ಕವನದಲ್ಲಿ ಚಿತ್ರಿಸಲಾಗಿದೆ.**

' ರೂಪಕ' ಎಂದರೆ ಕವಿಯು ತನ್ನ ಮನದ ಇಂಗಿತವನ್ನು ವ್ಯಕ್ತಪಡಿಸಲೆಂದು ಓದುಗರ ಕಣ್ಣಿಗೆ ಕಟ್ಟುವ ರೀತಿಯಲ್ಲಿ ಪ್ರಸಂಗವೊಂದನ್ನು ನುಡಿಗಳ ಮೂಲಕ ಚಿತ್ರಿಸಿರುವುದು.

ಖಗ=ಹಕ್ಕಿ; ವಿಲಾಪ=ಅಳುವಿಕೆ/ರೋದನ/ಪ್ರಲಾಪ/ಮಾತನಾಡುವಿಕೆ; ಸ್ವಚ್ಛಂದ+ಇಂದ; ಸ್ವಚ್ಛಂದ=ಯಾವುದೇ ಕಟ್ಟುಪಾಡುಗಳಿಗೆ ಒಳಪಡದ ನಡೆನುಡಿ /ಯಾವುದಕ್ಕೂ ಇಲ್ಲವೇ ಯಾರಿಗೂ ಅಡಿಯಾಳಾಗದಿರುವುದು; ಕಾನನ=ಕಾಡು/ ಅರಣ್ಯ; ಪಕ್ಷಿ=ಹಕ್ಕಿ; ಕಾನನದ ಪಕ್ಷಿ=ದೊಡ್ಡದಾಗಿ ಹಬ್ಬಿರುವ ಕಾಡಿನಲ್ಲಿ ಎಲ್ಲೆಂದರಲ್ಲಿ ಯಾವುದೇ ಅಡೆತಡೆಯಿಲ್ಲದೆ ಹಾರಾಡುತ್ತ, ಸ್ವತಂತ್ರವಾಗಿ ಬದುಕುತ್ತಿರುವ ಹಕ್ಕಿ;

ನಗರ=ಜನವಸತಿಯಿಂದ ಕೂಡಿರುವ ಪಟ್ಟಣ; ವಿಧಿವಶ+ಇಂದ; ವಿಧಿವಶ ದಿಂದ=ಆಕಸ್ಮಿಕವಾಗಿ; ಪಂಜರ=ಹಕ್ಕಿ ಇಲ್ಲವೇ ಪ್ರಾಣಿಗಳನ್ನು ಕೂಡಿ ಹಾಕಲು ಬಳಸುವ ಲೋಹದ ಸರಳುಗಳಿಂದ ಮಾಡಿರುವ ಉಪಕರಣ; ಪಂಜರದ ಪಕ್ಷಿ=ಪಂಜರದೊಳಗೆ ಸೆರೆಯಾಗಿ ಹಾರಾಡಲಾಗದೆ, ಪಂಜರದ ಕಿರಿದಾದ ಜಾಗದಲ್ಲಿಯೇ ಬದುಕುತ್ತಿರುವ ಹಕ್ಕಿ;

ಬಳಿಸಾರಿ=ಹತ್ತಿರ ಬಂದು; ಕುಶಲ=ನೆಮ್ಮದಿ/ಆರೋಗ್ಯ; ಕೇಳಿತ್ತು= ವಿಚಾರಿಸಿತು;

ಎನ್ನ+ಒಲವೆ; ಎನ್ನ=ನನ್ನ; ಒಲವು=ಪ್ರೀತಿ; ನಾವು+ಇಂದು; ಜೊತೆ+ಆಗಿ; ಎನಲು=ಎನ್ನಲು; ಪಿಸುಮಾತು=ಮೆಲ್ಲನೆಯ ದನಿಯಲ್ಲಿ; ಬಲು=ಬಹಳ/ಹೆಚ್ಚಿನ; ಹಿತ=ಒಳ್ಳೆಯದು;

**"ಎನ್ನೊಲವೆ ನಾವಿಂದು ಜೊತೆಯಾಗಿ ಹಾರುತ್ತ ಕಾನನದ ಮನೆ ಸೇರಿ ಬಾಳೋಣ" ಎನಲು ಪಂಜರದ ಪಕ್ಷಿ ಪಿಸುಮಾತಿನಿಂ ಹೇಳಿತ್ತು 'ಒಳಗೆ ಬಾ ಬಲು ಹಿತವು ಪಂಜರದ ಬಾಳು'**=ಪಂಜರದ ಸೆರೆಯಲ್ಲಿರುವ ಹಕ್ಕಿಯನ್ನು ಕಂಡ ಕಾನನದ ಹಕ್ಕಿಯು ತನ್ನಂತೆಯೇ ಸ್ವತಂತ್ರವಾಗಿ ಬಾಳುವ ಕಡೆಗೆ ಪ್ರೀತಿಯಿಂದ ಕರೆದಾಗ, ಪಂಜರದ ಹಕ್ಕಿಯು ಪಂಜರದ ಬಾಳಿನಲ್ಲಿಯೇ ಹೆಚ್ಚು ಹಿತವೆಂದು ಹೇಳುತ್ತ, ಅದನ್ನೇ ತಾನಿರುವ ಪಂಜರದೊಳಕ್ಕೆ ಕರೆಯುತ್ತದೆ. ದಾಸ್ಯಕ್ಕೆ ಒಗ್ಗಿ ಹೋಗಿರುವ ಪಂಜರದ ಹಕ್ಕಿಯ ಮಯ್ ಮನಕ್ಕೆ ಸ್ವತಂತ್ರವಾಗಿ ಬದುಕಬೇಕೆಂಬ ಆಸೆಯೇ ಇಲ್ಲವಾಗಿದೆ ಎಂಬುದನ್ನು ಈ ನುಡಿಗಳು ಸೂಚಿಸುತ್ತವೆ;

ರೆಕ್ಕೆ=ಹಕ್ಕಿಯು ಹಾರಾಡಲು ನೆರವಾಗುವ ಗರಿಗಳು; ಸ್ಥಳ+ಇಹುದು; ಸ್ಥಳ=ಜಾಗ/ಎಡೆ; ಇಹುದು=ಇರುವುದು; ಕನಿಕರ=ಕರುಣೆ/ಮರುಕ; ತೋರೆ=ತೋರಲು; ಕಾಣೆ=ಕಾಣೆನು; ಆಗಸ=ಆಕಾಶ/ಗಗನ;

**"ರೆಕ್ಕೆ ಬಿಚ್ಚಲು ಎಲ್ಲಿ ಸ್ಥಳವಿಹುದು ಪಂಜರದಿ?"ಎಂದು ಕಾಡಿನ ಹಕ್ಕಿ ಕನಿಕರವ ತೋರೆ "ಕುಳಿತುಕೊಳ್ಳಲು ಸ್ಥಳವ ನಾ ಕಾಣೆ ಆಗಸದಿ ಅದಕೆ ಪಂಜರದಿಂದ ಹೊರಗೆ ಬರಲಾರೆ"**=ಕಿರಿದಾದ ಪಂಜರದಲ್ಲಿ ರೆಕ್ಕೆಯನ್ನು ಬಿಚ್ಚಿ ಹಾರಾಡಲು ಜಾಗವು ಎಲ್ಲಿದೆಯೆಂದು ಗಗನದ ಹಕ್ಕಿಯು ಆತಂಕದಿಂದ ನುಡಿದರೆ, ಅನಂತವಾದ

ಆಕಾಶದಲ್ಲಿ ಕುಳಿತುಕೊಳ್ಳಲು ಜಾಗವನ್ನೇ ನಾನು ಕಾಣೆನು ಎಂದು ಪಂಜರದ ಹಕ್ಕಿ ತಾನು ಹೊರಬಾರದಿರುವುದಕ್ಕೆ ನೆಪವನ್ನು ಹೇಳುತ್ತದೆ.

ಸ್ವತಂತ್ರವಾಗಿ ಬದುಕನ್ನು ನಡೆಸುವ ಕಾನನದ ಹಕ್ಕಿಯು ಹಾರಾಡುತ್ತ ಬಾಳಬೇಕೆಂಬ ಕ್ರಿಯಾಶೀಲತೆಯಿಂದ ಕೂಡಿದ್ದರೆ, ದಾಸ್ಯದಿಂದ ಕುಗ್ಗಿಹೋಗಿರುವ ಪಂಜರದ ಹಕ್ಕಿಯು ಏನನ್ನು ಮಾಡದೆ ಕುಳಿತುಕೊಳ್ಳಲು ಬಯಸುವ ಜಡಮನಸ್ಸನ್ನು ಹೊಂದಿದೆ;

ಪಕ್ಷಿಗೆ+ಇಹ; ಇಹ=ಇರುವ; ಆತಂಕ=ಹೆದರಿಕೆ/ಚಿಂತೆ;

**ಪಂಜರದ ಪಕ್ಷಿಗಿಹ ಆತಂಕವನು ಕಂಡು ಸ್ವಾತಂತ್ರ್ಯಪ್ರಿಯ ಪಕ್ಷಿ ದುಃಖಗೊಂಡಿತ್ತು** =ದಾಸ್ಯಕ್ಕೆ ಒಳಗಾಗಿ ಸ್ವತಂತ್ರವಾಗಿ ಬದುಕಬೇಕೆಂಬ ಆಸೆಯನ್ನೇ ಕಳೆದುಕೊಂಡು, ಹೆದರಿಕೆಯಿಂದ ಕುಗ್ಗಿಹೋಗಿರುವ ಪಂಜರದ ಹಕ್ಕಿಯನ್ನು ನೋಡಿ, ಎಂದೆಂದಿಗೂ ಸ್ವಾತಂತ್ರ್ಯದ ಬದುಕನ್ನೇ ಮೆಚ್ಚುವ ಕಾನನದ ಹಕ್ಕಿಯು ಸಂಕಟಕ್ಕೆ ಒಳಗಾಯಿತು;

ವನ=ಕಾಡು/ಅರಣ್ಯ; ಸೌಂದರ್ಯ=ಚೆಲುವು/ಸೊಬಗು;

ಬಣ್ಣಿಸುವ= ವಿವರಿಸುವ;

**'ಎನ್ನೊಲವೆ ವನದ ಸೌಂದರ್ಯವನು ಬಣ್ಣಿಸುವ ಹಾಡುಗಳ ಹಾಡುವೆಯ?' ಎಂದು ಕೇಳಿತ್ತು**=ಕಾಡಿನ ಮರಗಿಡಗಳ ಅಂದಚೆಂದವನ್ನು, ಬೆಟ್ಟಗುಡ್ಡಗಳ ಸುಂದರ ನೋಟವನ್ನು, ಸುವಾಸನೆಯಿಂದ ಕೂಡಿದ ಹೂ ಕಾಯಿ ಹಣ್ಣುಗಳ ಬಣ್ಣವನ್ನು ಮತ್ತು ಹಕ್ಕಿಗಳ ಕೊರಳೊಳಗಿಂದ ಹೊರಹೊಮ್ಮುವ ಇಂಪಾದ ದನಿಯನ್ನು ಕುರಿತು ಬಣ್ಣಿಸುವ ಹಾಡುಗಳನ್ನು ಹಾಡಬಲ್ಲೆಯ ನೀನು ಎಂದು ಕಾನನದ ಹಕ್ಕಿಯು ಪಂಜರದ ಹಕ್ಕಿಯನ್ನು ಪ್ರಶ್ನಿಸುತ್ತದೆ. ಈ ಪ್ರಶ್ನೆಯ ಹಿನ್ನೆಲೆಯಲ್ಲಿ 'ಕಾಡಿನ ಸ್ವತಂತ್ರ ಜೀವನದಲ್ಲಿ ನಿಸರ್ಗದ ಚೆಲುವಿನ ಮಡಲಿನಲ್ಲಿ ನಾವು ಇದನ್ನೆಲ್ಲ ಕಾಣಬಹುದು ಮತ್ತು ಪಡೆದು ಆನಂದದಿಂದ ಬಾಳಬಹುದು' ಎಂಬುದನ್ನು ಪಂಜರದ ಹಕ್ಕಿಗೆ ಸೂಚಿಸುತ್ತದೆ;

ಮಾನವರ ಮಾತು=ಮಾನವರು ಕಲಿತು ಆಡುತ್ತಿರುವ ನುಡಿಗಳು; ಪಂಡಿತ= ಅಕ್ಕರದ ವಿದ್ಯೆಯನ್ನು ಚೆನ್ನಾಗಿ ಕಲಿತಿರುವವನು; ಜ್ಞಾನ=ತಿಳುವಳಿಕೆ/ಅರಿವು;

**'ಕಾನನದ ಹಾಡುಗಳ ನಾನು ಮರೆತಿಹೆ ನೋಡು... ಕುಳಿತಿಕೋ ನನ್ನ ಬಳಿ ಈ ಪಂಜರದಲಿ ಮಾನವರ ಮಾತನ್ನು ಹೇಳಿ ಕೊಡುವೆನು ನಾನು... ಪಂಡಿತರ ಜ್ಞಾನವನು ನಿನಗೆ ಕಲಿಸುವೆನು'**=ದಾಸ್ಯಕ್ಕೆ ಬಲಿಯಾಗಿರುವ ಪಂಜರದ ಹಕ್ಕಿಗೆ ನಿಸರ್ಗ ಸಹಜವಾದ ಸ್ವತಂತ್ರ ಬದುಕಿಗಿಂತಲೂ ಮಾನವರ ಕಟ್ಟುಪಾಡುಗಳಿಂದ ರಚನೆಗೊಂಡಿರುವ ಸಮಾಜದ ಬದುಕು ದೊಡ್ಡದಾಗಿ ಕಾಣಿಸುತ್ತಿದೆ;

ಕಂಪಿಸಿತು=ನಡುಗಿತು; ಹೊಮ್ಮಬೇಕು+ಎದೆಯಲ್ಲಿ; ಹೊಮ್ಮಬೇಕು=ಹೊರಸೂಸು/ಮೂಡಿಬರುವುದು; ಎದೆ=ಮನಸ್ಸು;

**'ಹೇಳಿಕೊಟ್ಟರೆ ಕಲಿಯಲಾರೆ ನೀ ಹಾಡುಗಳ ಹೊಮ್ಮಬೇಕೆದೆಯಲ್ಲಿ' ಎಂದು ಹೇಳಿತ್ತು**=ಈ ಜಗತ್ತಿನಲ್ಲಿ ಇತರರು ಹೇಳಿಕೊಟ್ಟ ನುಡಿಗಳಿಂದ ಕಲಿಯುವುದಕ್ಕಿಂತಲೂ ಯಾವುದೇ ಜೀವಿಯು ತಾನಾಗಿ ಪಡೆಯುವ ಅರಿವು ದೊಡ್ಡದು. ಆದ್ದರಿಂದ ಜೀವಿಯು ತನ್ನ ಸ್ವತಂತ್ರ ಮತಿಯಿಂದ ಲೋಕದ ಅರಿವನ್ನು ಪಡೆಯಬೇಕು. ದಾಸ್ಯಕ್ಕೆ ಒಗ್ಗಿಹೋದ ಮನಸ್ಸು ಹೊಸದೇನನ್ನೂ ಕಾಣಲಾರದು ಮಾತ್ರವಲ್ಲ, ಹೊಸತನ್ನು ಮೂಡಿಸಲಾರದು ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ;

ಮಧುರ=ಸವಿಯಾದ/ಸಿಹಿಯಾದ/ಇಂಪಾದ; ಮಿಲನ=ಜೊತೆಗೂಡುವಿಕೆ/ಒಬ್ಬರನ್ನೊಬ್ಬರು ಒಡಗೂಡುವುದು; ಬಯಕೆ+ಇಂದ; ಬಯಕೆ=ಆಸೆ/ಇಚ್ಛೆ; ಒಲವಿನ+ಆಸೆ; ತೀವ್ರಗೊಂಡಿತ್ತು=ಹೆಚ್ಚಾಯಿತು;

**ಈ ಜೋಡಿ ವಿಧಿಯಾಟದಲ್ಲಿ ಸಿಲುಕಿತ್ತು**=ಈ ಎರಡು ಹಕ್ಕಿಗಳು ಬೇರೆ ಬೇರೆ ಬದುಕಿನ ನೆಲೆಗಳಿಗೆ ಒಗ್ಗಿಕೊಂಡಿದ್ದವು;

ಕಂಬಿ=ಲೋಹದ ಸರಳು; ಎಡೆ+ಇಂದು; ರೋದಿಸು=ಅಳು/ಗೋಳಾಡು; ಅನ್ಯೋನ್ಯ=ಪರಸ್ಪರ ಪ್ರೀತಿಯಿಂದ; ಅರಿಯಲು=ಒಂದು ಮತ್ತೊಂದನ್ನು ತಿಳಿದುಕೊಳ್ಳಲು; ತೊಳಲಾಡು=ಸಂಕಟಪಡು/ತುಂಬಾ ಆತಂಕದಿಂದ ಒದ್ದಾಡು; ಮೂಡು=ಹುಟ್ಟು/ಉದಯಿಸು; ಸಹಮತ=ಇಬ್ಬರಲ್ಲೂ ಒಂದೇ ಬಗೆಯ ನಿಲುವು;

ಸನಿಹ=ಹತ್ತಿರ/ಸಮೀಪ; ಬಾರ+ಎಂದು;

**ರೆಕ್ಕೆಗಳ ಬಡಿಯುತ್ತ ಹಕ್ಕಿಗಳು ಹಾಡಿದವು ಎನ್ನೊಲವೆ ಸನಿಹ ಬಾ ಸನಿಹ ಬಾರೆಂದು**=ಎರಡು ಹಕ್ಕಿಗಳು ಒಂದೆಡೆಯಲ್ಲಿ ಬಾಳಬೇಕೆಂದು ಬಹಳ ಹಂಬಲಿಸಿದವು. ಆದರೆ ಅದು ಆಗುತ್ತಿಲ್ಲ. ಏಕೆಂದರೆ ಅವುಗಳ ಬದುಕಿನ ನೆಲೆ ಬೇರೆ ಬೇರೆಯಾಗಿದೆ;

ಕವಿ=ಕಾವ್ಯವನ್ನು ರಚಿಸುವವನು; ಉದ್ಗರಿಸಿದನು=ತನ್ನ ಮನದ ಒಳಮಿಡಿತಗಳನ್ನು ನುಡಿಗಳ ರೂಪದಲ್ಲಿ ಹೇಳಿದನು; ಇದಕೆ+ಎನ್ನುವರು; ವಿಧಿಯಾಟ=ಜಗತ್ತಿನಲ್ಲಿ ನಡೆಯುವ ಯಾವುದೇ ಒಂದು ಕ್ರಿಯೆಗೆ ಇಲ್ಲವೇ ಆಗುಹೋಗುಗಳಿಗೆ ಕಾರ್ಯ ಕಾರಣದ ನಡುವಣ ನಂಟನ್ನು ಸರಿಯಾಗಿ ಗುರುತಿಸಿ ಹೇಳಲು ಆಗದಿದ್ದಾಗ, ಅದನ್ನು ವಿಧಿಬರಹ/ಹಣೆಬರಹ/ವಿಧಿಯ ಆಟ ಎಂದು ಹೇಳುವುದು ಲೋಕರೂಢಿಯಾಗಿದೆ;

**‘ಪಂಜರದ ಮುಚ್ಚಿರುವ ಬಾಗಿಲಿಗೆ ಹೆದರುವೆನು ನಾನು ಬರಲೊಲ್ಲೆ’ ಎಂದಿತು ಕಾಡಹಕ್ಕಿ**=ಕಾಡಿನ ಹಕ್ಕಿಗೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಬಾಳುವುದಕ್ಕೆ ಇಚ್ಚೆಯಿಲ್ಲ;

ಬಲಹೀನ=ಶಕ್ತಿಯಿಲ್ಲದ/ಕಸುವಿಲ್ಲದ; ರೆಕ್ಕೆಯಿಂ=ರೆಕ್ಕೆಯಿಂದ;

ಮೆಲುದನಿಯಲಿ +ಉಸುರಿತ್ತು; ಉಸುರು=ಹೇಳು/ನುಡಿ;

**‘ಬಲಹೀನ ರೆಕ್ಕೆಯಿಂ ಹಾರಲಾರೆನು ನಾನು’ ಮೆಲುದನಿಯಲುಸುರಿತ್ತು ಪಂಜರದ ಪಕ್ಷಿ**=ದಾಸ್ಯಕ್ಕೆ ಒಗ್ಗಿಹೋಗಿರುವ ಪಂಜರದ ಹಕ್ಕಿಯು ಸ್ವತಂತ್ರವಾಗಿ ಬಾಳಬೇಕೆಂಬ ಮನಸ್ಸನ್ನೇ ಹೊಂದಿಲ್ಲ. ಆದ್ದರಿಂದಲೇ ಹಾರುವ ರೆಕ್ಕೆಗಳಿದ್ದರೂ ಅದನ್ನು ಬಳಸಿಕೊಂಡು ಬಾಳಬೇಕೆಂಬ ಇಚ್ಚೆಯಾಗಲಿ, ಕೆಚ್ಚಾಗಲಿ, ತನ್ನಲ್ಲಿ ತನಗೆ ನಂಬಿಕೆಯಾಗಲಿ ಪಂಜರದ ಹಕ್ಕಿಯ ಮಯ್ ಮನದಲ್ಲಿ ಇಲ್ಲವಾಗಿದೆ;

‘ಖಗ ವಿಲಾಪ’ ಕವನದ ರೂಪಕವನ್ನು ಮತ್ತೊಂದು ರೀತಿಯಲ್ಲಿಯೂ ವಿವರಿಸಿಕೊಳ್ಳಬಹುದು. ಕ್ರಿ.ಶ. ೧೯೬೯ರಲ್ಲಿ ಇಂಗ್ಲೆಂಡಿನ **Desmond Morris** ಎಂಬ ಹೆಸರಿನ ಪ್ರಾಣಿಶಾಸ್ತ್ರಜ್ಞರು **‘The Human Zoo‘** ಎಂಬ ಹೊತ್ತಿಗೆಯನ್ನು ರಚಿಸಿದ್ದಾರೆ. ಹೊರನೋಟಕ್ಕೆ ಮಾನವ ಸಮುದಾಯವು ಸರ್ವ ಸ್ವತಂತ್ರವಾಗಿ ಬಾಳುತ್ತಿರುವಂತೆ ಕಂಡುಬಂದರೂ, ನಿಜಜೀವನದಲ್ಲಿ ಹೇಗೆ ಪ್ರತಿಯೊಬ್ಬ ವ್ಯಕ್ತಿಯು ತಾನು ವಾಸಮಾಡುತ್ತಿರುವ ದೇಶದ ಕಾನೂನುಕಟ್ಟಲೆಗಳ ಮತ್ತು ತಾನು ಹುಟ್ಟಿ ಬೆಳೆದು ಬಾಳುತ್ತಿರುವ ಕುಟುಂಬದ ಜಾತಿಮತದ ಆಚರಣೆ ಹಾಗೂ ಸಂಪ್ರದಾಯಗಳ ಪಂಜರದಲ್ಲಿ ಮಾನಸಿಕವಾಗಿ ಸೆರೆಯಾಳಾಗಿದ್ದಾನೆ ಎಂಬುದನ್ನು ಈ ಹೊತ್ತಿಗೆಯಲ್ಲಿ ವಿವರಿಸಿದ್ದಾರೆ.

ಪ್ರಾಣಿಸಂಗ್ರಹಾಲಯದಲ್ಲಿರುವ ಪ್ರಾಣಿಗಳ ಮತ್ತು ಸಾಮಾಜಿಕ ಒಕ್ಕೂಟಗಳಾದ ಲಿಂಗ, ಜಾತಿ, ಮತ, ನುಡಿ, ಪ್ರಾಂತ್ಯ ಮತ್ತು ಆಡಳಿತದ ಕಟ್ಟುಪಾಡುಗಳಿಗೆ ಒಳಗಾಗಿ ಬಾಳುತ್ತಿರುವ ಮಾನವರ ವರ್ತನೆಗಳನ್ನು ಪರಸ್ಪರ ಹೋಲಿಕೆ ಮಾಡಿ ತೋರಿಸುತ್ತ, ಪ್ರಾಣಿಗಳ ಮತ್ತು ಮಾನವರ ವರ್ತನೆಗಳಲ್ಲಿ ಕಂಡು ಬರುವ ಕೆಲವು ಸಮಾನ ಸಂಗತಿಗಳನ್ನು ಗುರುತಿಸಿ, ಪಂಜರದೊಳಗಿನ ಪ್ರಾಣಿಗಳಂತೆಯೇ ಮಾನವರು ಬಹುಬಗೆಯ ನಿಯಂತ್ರಣಕ್ಕೆ ಒಳಪಟ್ಟಿದ್ದಾರೆ ಎಂಬುದನ್ನು ನಿರೂಪಿಸಿದ್ದಾರೆ.

ಪಂಜರದ ಹಕ್ಕಿಯು ಹೇಗೆ ಪಂಜರದಿಂದ ಹೊರಬರಲಾರದೆ ಹಿಂಜರಿಯಿತೋ ಅಂತೆಯೇ ಮಾನವರು ಕೂಡ ತಮ್ಮ ತಮ್ಮ ಸಾಮಾಜಿಕ ಮತ್ತು ಪ್ರಾದೇಶಿಕ ಕಟ್ಟುಪಾಡುಗಳಿಂದ ಮಾನಸಿಕವಾಗಿ ಹೊರಬರಲಾರದೆ, ಹುಟ್ಟಿನಿಂದ ಸಾವಿನ ಕೊನೆಗಳಿಗೆಯ ತನಕ ಪಂಜರದ ಪ್ರಾಣಿಗಳಂತೆಯೇ ಆಗಿರುತ್ತಾರೆ.

ಆದ್ದರಿಂದಲೇ ಮಾನವ ಸಮುದಾಯ ಜನಾಂಗ/ಜಾತಿ/ಮತ/ದೇವರು/ಪ್ರಾಂತ್ಯ/ ನುಡಿ/ಲಿಂಗ ತಾರತಮ್ಯವೆಂಬ ಮಾನಸಿಕ ಪಂಜರಗಳಿಂದ ಹೊರಬಂದು, ಪರಸ್ಪರ ಒಲವು ನಲಿವು ಮತ್ತು ನೆಮ್ಮದಿಯಿಂದ ಜೊತೆಗೂಡಿ ಬಾಳಲು ಆಗುತ್ತಿಲ್ಲವೆಂಬ ಸಂಗತಿಯನ್ನು ಈ ಕವನದ ರೂಪಕದಿಂದ ತಿಳಿಯಬಹುದು.

# ೭. ಪೂಜೆ

ದೇವ ನಿನಗಾಗಿ ಬೇರೊಂದು ಪೂಜಾಗೃಹವ
ರಚಿಸಲಾರೆನು ನನ್ನ ಮನೆ ಚಿಕ್ಕದಿಹುದು
ನಮ್ಮ ಜೊತೆಯಲೆ ದೇವ ಹಗಲಿರುಳು ನೆಲೆಸಿದರೆ
ನೀನು ನಮ್ಮವನಾಗಿ ಮನಕೆ ಮುದವಹುದು

ನಿನಗೆ ವೈಭವದಿಂದ ಮಾಡಲಾರೆನು ಪೂಜೆ
ಆದರೂ ನೀ ನೆಲೆಸು ನಮ್ಮ ಬಳಿಯಲ್ಲೇ
ಪ್ರೀತಿಯೊಂದೇ ನನ್ನ ಬಳಿಯಿರುವ ಸಂಪದವು
ಒಲುಮೆ ಪೂಜೆಯನಷ್ಟೆ ನಾ ಮಾಡಬಲ್ಲೆ

ನಿನ್ನೊಲುಮೆ ಪೂಜೆಯನು ನಾನೆಸಗಿದರೆ ದೇವ
ಎಲ್ಲೆಲ್ಲು ಮಧುರ ಸಂಗೀತ ತುಂಬುವುದು
ಮಧುರ ಮುರಲಿಯ ನಾದ ತಂತಾನೆ ಹೊಮ್ಮುವುದು
ಕಾನನದ ತುಂಬೆಲ್ಲ ಹೂವು ಅರಳುವುದು.

**ಸಹಮಾನವರೊಡನೆ ಒಲವು ನಲಿವು ನೆಮ್ಮದಿಯಿಂದ ಬಾಳುವಂತಹ ಒಳ್ಳೆಯ ನಡೆನುಡಿಯಲ್ಲಿ ದೇವರು ನೆಲೆಸಿದ್ದಾನೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಪೂಜೆ=ದೇವರ ವಿಗ್ರಹವನ್ನು ಹೂಹಣ್ಣುಕಾಯಿಗಳಿಂದ ಅಲಂಕರಿಸಿ, ಧೂಪದೀಪಗಳನ್ನು ಬೆಳಗಿಸಿ ಮಾಡುವ ಆಚರಣೆ; ದೇವ=ದೇವರು; ಬೇರೆ+ ಒಂದು; ಗೃಹ=ಮನೆ/ಕೊಟಡಿ; ಪೂಜಾಗೃಹ=ದೇವರ ಮನೆ; ರಚಿಸು=ಕಟ್ಟು; ಚಿಕ್ಕದು+ಇಹುದು; ಇಹುದು=ಇರುವುದು;

**ದೇವ ನಿನಗಾಗಿ ಬೇರೊಂದು ಪೂಜಾಗೃಹವ ರಚಿಸಲಾರೆನು ನನ್ನ ಮನೆ ಚಿಕ್ಕದಿಹುದು**=ವ್ಯಕ್ತಿಯು ತನ್ನ ಮನೆಯು ಚಿಕ್ಕದಾಗಿರುವುದರಿಂದ ದೇವರಿ ಗಾಗಿಯೇ ಪ್ರತ್ಯೇಕವಾದ ಒಂದು ಕೊಟಡಿಯನ್ನು ಕಟ್ಟಿಸುವುದಕ್ಕೆ ತನ್ನಿಂದ

ಆಗುತ್ತಿಲ್ಲವೆಂದು ಹೇಳುತ್ತಿದ್ದಾನೆ. ಈ ನುಡಿಗಳ ಮೂಲಕ ದೇವರ ಬಗೆಗಿನ ಒಂದು ವಾಸ್ತವ ಸಂಗತಿಯು ನಮಗೆ ತಿಳಿದುಬರುತ್ತದೆ.

"ತಮ್ಮ ಸಂಕಟಗಳನ್ನು ಪರಿಹರಿಸಿ ತಮಗೆ ಒಳಿತನ್ನು ಮಾಡಿ ಜೀವನದ ಉದ್ದಕ್ಕೂ ತಮ್ಮನ್ನು ಕಾಪಾಡಬಲ್ಲ ಒಂದು ಶಕ್ತಿಯನ್ನಾಗಿ ಇಲ್ಲವೇ ವ್ಯಕ್ತಿಯನ್ನಾಗಿ" ದೇವರನ್ನು ಮಾನವ ಸಮುದಾಯ ತನ್ನ ಮನದಲ್ಲಿ ಕಲ್ಪಿಸಿಕೊಂಡಿದೆ. ಆದ್ದರಿಂದಲೇ ದೇವರನ್ನು ಒಲಿಸಿಕೊಳ್ಳಲೆಂದು ಪೂಜಿಸುವ ರೀತಿಯು ನೂರೆಂಟು ಬಗೆಗಳಲ್ಲಿರುತ್ತದೆ. ಜಗತ್ತಿನ ಜನ ಸಮುದಾಯಕ್ಕೆ ಅಗತ್ಯವಾದುದೆಲ್ಲವನ್ನೂ ತಮ್ಮ ದುಡಿಮೆಯಿಂದ ಉತ್ಪಾದಿಸುವ ಶ್ರಮಜೀವಿಗಳಾದ ಬಡವರ ಕಿರಿದಾದ ಗುಡಿಸಲು ಗಳಲ್ಲಿ ದೇವರ ಮನೆಗೆ ಜಾಗವಿಲ್ಲ. ಏಕೆಂದರೆ ಅಲ್ಲಿ ವಾಸಿಸುವ ಮಂದಿಗೆ ಸರಿಯಾಗಿ ಜಾಗವಿರುವುದಿಲ್ಲ.

ವ್ಯಕ್ತಿಗಳ ಹಣಕಾಸಿನ ಮಟ್ಟ ಉತ್ತಮಗೊಳ್ಳುತ್ತ ಸಾಗಿದಂತೆಲ್ಲಾ ದೇವರ ಬಗೆಗಿನ ಒಲವು ಹೆಚ್ಚಾಗತೊಡಗುತ್ತದೆ. ಏಕೆಂದರೆ ಸಂಪತ್ತು ಕೂಡಿದಂತೆಲ್ಲಾ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಸಂಪತ್ತನ್ನು ಪಡೆಯಬೇಕೆಂಬ ಆಸೆ ಮತ್ತು ಇರುವ ಸಂಪತ್ತು ಎಲ್ಲಿ ಕಳೆದುಹೋಗುವುದೋ ಎಂಬ ಆತಂಕ ವ್ಯಕ್ತಿಗೆ ಹೆಚ್ಚಾಗುತ್ತದೆ. ಆದ್ದರಿಂದಲೇ ವ್ಯಕ್ತಿಯ ಸಂಪಾದನೆಯು ಹೆಚ್ಚಾದಂತೆಲ್ಲ ದೇವರ ಪೂಜೆಯ ಆಚರಣೆಗಳ ಆಡಂಬರ ಹೆಚ್ಚಾಗುತ್ತದೆ. ಸಿರಿವಂತರು ಕಟ್ಟಿಸುವ ಮನೆಗಳಲ್ಲಿ ದೇವರಮನೆಯು ಬಹುದೊಡ್ಡದಾಗಿರುತ್ತದೆ ಮತ್ತು ಬೆಲೆ ಬಾಳುವ ಒಡವೆ ವಸ್ತುಗಳಿಂದ ಸಿಂಗಾರಗೊಂಡು ಕಂಗೊಳಿಸುತ್ತಿರುತ್ತದೆ;

ಹಗಲು+ಇರುಳು; ಇರುಳು=ರಾತ್ರಿ; ನೆಲೆಸು=ವಾಸಿಸು/ತಂಗು/ಬಿಡಾರ ಹೂಡು; ಮುದ+ಅಹುದು; ಮುದ=ಆನಂದ ; ಅಹುದು=ಆಗುವುದು;

**ನಮ್ಮ ಜೊತೆಯಲೆ ದೇವ ಹಗಲಿರುಳು ನೆಲೆಸಿದರೆ ನೀನು ನಮ್ಮವನಾಗಿ ಮನಕೆ ಮುದವಹುದು**=ನಮ್ಮ ಜತೆಜತೆಯಲ್ಲಿಯೇ ಅಂದರೆ ನಮ್ಮ ಮಯ್ ಮನದಲ್ಲಿಯೇ ದೇವರಾದ ನೀನು ನೆಲೆಸಿದರೆ, ನಾವು ಸದಾಕಾಲ ಆನಂದ ವಾಗಿರುತ್ತೇವೆ. ನಮ್ಮ ಮಯ್ ಮನದಲ್ಲಿ ನಿರಂತರವಾಗಿ ತುಡಿಯುವ ಒಳ್ಳೆಯ ಮತ್ತು ಕೆಟ್ಟ ಒಳಮಿಡಿತಗಳಲ್ಲಿ ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯ ನಡೆನುಡಿಯಿಂದ ಬಾಳುವುದಕ್ಕೆ ಅಗತ್ಯವಾದ ಅರಿವು ಮತ್ತು ಎಚ್ಚರವನ್ನು ನೀನು ನಮಗೆ ನೀಡುತ್ತಿರುತ್ತೀಯೆ;

ವೈಭವ+ಇಂದ; ವೈಭವ=ಆಡಂಬರ/ಸಿರಿಯಿಂದ ಕೂಡಿರುವುದು ;

**ನಿನಗೆ ವೈಭವದಿಂದ ಮಾಡಲಾರೆನು ಪೂಜೆ**=ದೊಡ್ಡ ಪ್ರಮಾಣದಲ್ಲಿ ಹಣವನ್ನು ವೆಚ್ಚಮಾಡುತ್ತ ನಿನ್ನನ್ನು ಅದ್ದೂರಿಯಾಗಿ ಪೂಜೆ ಮಾಡುವ ಸಿರಿವಂತಿಕೆ ನನ್ನಲ್ಲಿಲ್ಲ;

**ಆದರೂ ನೀ ನೆಲೆಸು ನಮ್ಮ ಬಳಿಯಲ್ಲೇ**=ಸಿರಿಸಂಪದ ಇಲ್ಲವೆಂದು ನಮ್ಮನ್ನು ಕಡೆಗಣಿಸದೆ ನಮ್ಮ ಬಳಿಯಲ್ಲಿ ನೆಲೆಸು;

ಪ್ರೀತಿ+ಒಂದೇ; ಪ್ರೀತಿ=ಇತರರನ್ನು ತನ್ನಂತೆಯೇ ಕಾಣುತ್ತ, ತನ್ನ ಒಳಿತಿನ ಜತೆಗೆ ಇತರರಿಗೂ ಒಳಿತನ್ನು ಉಂಟುಮಾಡುವಂತಹ ಒಲವು, ನಲಿವು, ಕರುಣೆ ಮತ್ತು ಗೆಳೆತನದ ನಡೆನುಡಿ ; ಸಂಪದ=ಸಂಪತ್ತು/ಒಡವೆವಸ್ತು ; ಒಲುಮೆ=ಪ್ರೀತಿ/ಒಲವು; ಪೂಜೆಯನ್+ಅಷ್ಟೆ; ಅಷ್ಟೆ=ಮಾತ್ರ;

**ಪ್ರೀತಿಯೊಂದೇ ನನ್ನ ಬಳಿಯಿರುವ ಸಂಪದವು ಒಲುಮೆ ಪೂಜೆಯನಷ್ಟೆ ನಾ ಮಾಡಬಲ್ಲೆ**=ನನ್ನ ಬಳಿ ಪ್ರೀತಿಯೆಂಬ ಸಂಪತ್ತಿದೆ. ನಿತ್ಯ ಜೀವನದಲ್ಲಿ ಒಳ್ಳೆಯ ನಡೆನುಡಿಯಿಂದ ಬಾಳುವುದೇ ದೇವರಾದ ನಿನಗೆ ಮಾಡುವ ಪೂಜೆಯೆಂದು ನಂಬಿ, ಅದರಂತೆಯೇ ಬಾಳಲು ಶಕ್ತನಾಗಿದ್ದೇನೆ;

ನಿನ್ನ+ಒಲುಮೆ; ನಾನ್+ಎಸಗಿದರೆ; ಎಸಗು=ಮಾಡು/ಆಚರಿಸು; ಎಲ್ಲ+ಎಲ್ಲು; ಎಲ್ಲೆಲ್ಲು=ಎಲ್ಲ ಕಡೆಗಳಲ್ಲಿಯೂ; ಮಧುರ=ಇಂಪಾದ/ಸವಿಯಾದ; ಸಂಗೀತ=ಹಾಡು/ಗೀತೆ ;

**ನಿನ್ನೊಲುಮೆ ಪೂಜೆಯನು ನಾನೆಸಗಿದರೆ ದೇವ ಎಲ್ಲೆಲ್ಲು ಮಧುರ ಸಂಗೀತ ತುಂಬುವುದು**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಪ್ರತಿಯೊಬ್ಬ ವ್ಯಕ್ತಿಯು ಸಹಮಾನವರೊಡನೆ ಒಲುಮೆಯಿಂದ ನಡೆದುಕೊಂಡರೆ, ಎಲ್ಲರೂ ಜೀವನಕ್ಕೆ ಅಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯವನ್ನು ಪಡೆದು ಬಾಳಬಹುದು. ಆಗ ಎಲ್ಲರ ಬದುಕು ಒಲವು ನಲಿವು ನೆಮ್ಮದಿಯಿಂದ ಕೂಡಿರುತ್ತದೆ.;

ಮುರಲಿ=ಕೊಳಲು/ವೇಣು; ನಾದ=ದನಿ; ತಂತಾನೆ=ತಾನಾಗಿಯೇ; ಹೊಮ್ಮು=ಹೊರಸೂಸು/ಹರಡು; ಕಾನನ=ಕಾಡು/ಅರಣ್ಯ; ತುಂಬ+ಎಲ್ಲ; ಅರಳು=ವಿಕಾಸವಾಗು/ಬಿರಿಯುವುದು;

**ಮಧುರ ಮುರಲಿಯ ನಾದ ತಂತಾನೆ ಹೊಮ್ಮುವುದು ಕಾನನದ ತುಂಬೆಲ್ಲ ಹೂವು ಅರಳುವುದು**=ಕೊಳಲಿನ ಇಂಪಾದ ದನಿಯು ತಾನಾಗಿಯೇ ಹೊರಹೊಮ್ಮುತ್ತಿರಲು, ಅದರ ದನಿಗೆ ಕಾಡಿನ ಮರಗಿಡಬಳ್ಳಿಗಳಲ್ಲಿ ಹೂಗಳು ಅರಳುವುವು. ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಯಾಗಿವೆ. ವ್ಯಕ್ತಿಗಳು ಪರಸ್ಪರ ಪ್ರೀತಿಯ ನಡೆನುಡಿಯಿಂದ ಬಾಳಲು ತೊಡಗಿದರೆ, ತಾನಾಗಿಯೇ ಮಾನವ ಸಮುದಾಯದಲ್ಲಿ ಆನಂದ ಮತ್ತು ನೆಮ್ಮದಿ ನೆಲೆಗೊಳ್ಳುತ್ತದೆ;

ಈ ಕವನವನ್ನು ಮತ್ತೊಂದು ನೆಲೆಯಿಂದಲೂ ವಿವರಿಸಿಕೊಳ್ಳಬಹುದು. ಸಾವಿರಾರು ಮಂದಿ ಪ್ರತಿನಿತ್ಯವೂ ತಮ್ಮ ಮನೆಗಳಲ್ಲಿ ಮತ್ತು ಊರ ದೇಗುಲಗಳಲ್ಲಿ

ದೇವರನ್ನು ಬಹುಬಗೆಗಳಲ್ಲಿ ಪೂಜಿಸುತ್ತಿದ್ದಾರೆ. ಬಡವರು ಸರಳವಾದ ರೀತಿಯಲ್ಲಿ ಪೂಜಿಸಿದರೆ, ಉಳ್ಳವರು ಬೆಲೆಬಾಳುವ ಒಡವೆ ವಸ್ತುಗಳನ್ನು ದೇವರಿಗೆ ಕಾಣಿಕೆಯಾಗಿ ನೀಡಿ ಆಡಂಬರದಿಂದ ಪೂಜಿಸುತ್ತಾರೆ.

ಆಗಾಗ್ಗೆ ದೇವರ ಇಲ್ಲವೇ ದೇಗುಲದ ಹೆಸರಿನಲ್ಲಿ ಜಾತಿಜಾತಿಗಳ ನಡುವೆ ಕೋಮುಕೋಮುಗಳ ನಡುವೆ ಹೊಡೆದಾಟಗಳು ಉಂಟಾಗಿ ನೂರಾರು ಮಂದಿ ಸಾವುನೋವುಗಳಿಗೆ ಗುರಿಯಾಗುತ್ತಿರುತ್ತಾರೆ. ಮೇಲು ಜಾತಿ, ಮೇಲು ವರ್ಗ ಮತ್ತು ಆಡಳಿತದ ಉನ್ನತ ಗದ್ದುಗೆಯಲ್ಲಿ ಕುಳಿತವರು ತಮ್ಮ ಸಂಪತ್ತನ್ನು ಮತ್ತು ಆಡಳಿತದ ಗದ್ದುಗೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಈ ಬಗೆಯ ಸನ್ನಿವೇಶಗಳನ್ನು ಹುಟ್ಟುಹಾಕುತ್ತಾರೆ. ದೇವರು ಮತ್ತು ದೇಗುಲವನ್ನು ಒಂದು ನೆಪವನ್ನಾಗಿ ಮಾಡಿ ಕೊಂಡು ದುಡಿಯುವ ವರ್ಗದ ಶ್ರಮಜೀವಿಗಳ ಮನದಲ್ಲಿ ಒಡಕನ್ನು ಉಂಟು ಮಾಡಿ, ಸದಾಕಾಲ ಜನಮನದಲ್ಲಿ ಪರಸ್ಪರ ಅನುಮಾನ, ಆತಂಕ, ಅಸೂಯೆ ಮತ್ತು ಹಗೆತನವಿರುವಂತೆ ಮಾಡುತ್ತಾರೆ. ಜಗತ್ತಿನ ಚರಿತ್ರೆಯ ಉದ್ದಕ್ಕೂ ದೇವರು ಮತ್ತು ದೇಗುಲದ ಹೆಸರಿನಲ್ಲಿ ನಡೆಯುತ್ತಿರುವ ಹೋರಾಟಗಳಲ್ಲಿ ಹರಿದಿರುವ ಮತ್ತು ಹರಿಯುತ್ತಿರುವ ಮಾನವರ ನೆತ್ತರ ಪ್ರಮಾಣಕ್ಕೆ ಮಿತಿಯೇ ಇಲ್ಲವಾಗಿದೆ.

ಆದ್ದರಿಂದಲೇ ಮಾನವ ಸಮುದಾಯದ ಒಳಿತಿಗಾಗಿ ಚಿಂತಿಸುವ ವ್ಯಕ್ತಿಗಳೆಲ್ಲರೂ ಮಣ್ಣು/ಕಲ್ಲು/ಮರ/ಲೋಹದ ವಿಗ್ರಹರೂಪಿ ದೇವರನ್ನು ಮತ್ತು ಆಡಂಬರದ ಆಚರಣೆಗಳಿಂದ ಕೂಡಿರುವ ದೇಗುಲವನ್ನು ನಿರಾಕರಿಸಿ, ನಿತ್ಯ ಜೀವನದಲ್ಲಿ ಸಹಮಾನವರ ಜತೆಯಲ್ಲಿ ಒಳ್ಳೆಯ ನಡೆನುಡಿಗಳಿಂದ ಬಾಳುತ್ತಾರೆ. ಇಂತಹವರ ಪಾಲಿಗೆ ದೇವರ ಪೂಜೆ ಎಂದರೆ **'ಪ್ರೀತಿ, ಕರುಣೆ ಮತ್ತು ಗೆಳೆತನದ ನಡೆನುಡಿ.'**

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

# ಚದುರಿದ ಹಕ್ಕಿಗಳು

ರವೀಂದ್ರನಾಥ ಠಾಕೂರ್ ಅವರು ಬಂಗಾಳಿ ಮತ್ತು ಇಂಗ್ಲಿಶ್ ನುಡಿಯಲ್ಲಿ ರಚಿಸಿರುವ ೬೬೬ ಕಿರುಕವಿತೆಗಳನ್ನು ಜಿ.ರಾಮನಾಥ ಭಟ್ ಅವರು 'ಚದುರಿದ ಹಕ್ಕಿಗಳು' ಎಂಬ ಹೆಸರಿನಲ್ಲಿ ಕನ್ನಡ ನುಡಿಗೆ ಅನುವಾದ ಮಾಡಿದ್ದಾರೆ. ಠಾಕೂರ್ ಅವರು ತಮ್ಮ ಕಿರುಕವಿತೆಗಳಿಗೆ ತಲೆಬರೆಹವಾಗಿ ಹೆಸರುಗಳನ್ನು ನೀಡಿಲ್ಲ. ಈ ಕಿರುಕವಿತೆಗಳ ಮೊದಲ ಸಂಕಲನವನ್ನು ಕ್ರಿ.ಶ.೧೮೯೯ರಲ್ಲಿ 'ಕಣಿಕಾ' ಎಂಬ ಹೆಸರಿನಲ್ಲಿ ಠಾಕೂರ್ ಅವರು ಪ್ರಕಟಿಸಿದ್ದರು. 'ಕಣಿಕಾ' ಎಂಬ ಬಂಗಾಳಿ ಪದಕ್ಕೆ ಕನ್ನಡದಲ್ಲಿ 'ತುಣುಕುಗಳು' ಎಂಬ ತಿರುಳಿದೆ.

## ೮

ಸಹಯೋಗಿಗಳಲಿ ಪ್ರೀತಿಯ ಬಯಸುವನು ದೇವ
ದೆವ್ವ ಬಯಸುತಲಿಹುದು ಬರಿ ದಾಸ್ಯ ಭಾವ
ಕ್ರೂರ ದೊರೆಗೂ ಇಹುದು ಸ್ವಾತಂತ್ರ್ಯದಾ ಬಯಕೆ
ಪ್ರಜೆಗಳಾ ಸ್ವಾತಂತ್ರ್ಯಹರಣ ಮಾಡಲಿಕೆ
ಯಾರು ಪ್ರಶ್ನಿಸದಂಥ ಪರಮ ಸ್ವಾತಂತ್ರ್ಯವನು
ತನಗಷ್ಟೆ ಬೇಕೆಂದು ಅವನು ಬಯಸುವನು.

**ಕ್ರೂರವಾದ ನಡೆನುಡಿಯುಳ್ಳ ರಾಜನ ಇಲ್ಲವೇ ನಾಡಿನ ಉನ್ನತವಾದ ಆಡಳಿತದ ಗದ್ದುಗೆಯಲ್ಲಿರುವ ಕ್ರೂರಿಯಾದ ವ್ಯಕ್ತಿಯ ಮನದ ಬಯಕೆಗಳೇನು ಎಂಬುದನ್ನು ಈ ಕವನದಲ್ಲಿ ಹೇಳಲಾಗಿದೆ.**

ಸಹಯೋಗಿ=ಸಂಗಡಿಗ/ಜತೆಗಾರ; ಪ್ರೀತಿ=ಅನುರಾಗ/ಒಲವು; ಬಯಸು= ಹಂಬಲಿಸು/ಕೋರು;

ದೇವ=ದೇವರು. ಈ ಪದ ಒಂದು ರೂಪಕವಾಗಿ ಬಳಕೆಗೊಂಡಿದೆ. ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿ;

**ಸಹಯೋಗಿಗಳಲಿ ಪ್ರೀತಿಯ ಬಯಸುವನು ದೇವ**=ತನ್ನ ಜತೆಗಾರರನ್ನು/ಪ್ರಜೆಗಳನ್ನು/ಸಹಮಾನವರನ್ನು ಪ್ರೀತಿ, ಕರುಣೆ, ಗೆಳೆತನ ಮತ್ತು ಸಮಾನತೆಯ ಮೂಲಕ ಕಾಣುತ್ತ, ಅವರಿಂದಲೂ ಅದೇ ಬಗೆಯ ವರ್ತನೆಯನ್ನು ಬಯಸುವವನು ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿಯಾಗಿರುತ್ತಾನೆ;

ದೆವ್ವ=ಪಿಶಾಚಿ. ಈ ಪದ ಒಂದು ರೂಪಕವಾಗಿ ಬಳಕೆಗೊಂಡಿದೆ. ಕೆಟ್ಟ ನಡೆನುಡಿಯುಳ್ಳ ವ್ಯಕ್ತಿ;

'ದೇವರು ಮತ್ತು ದೆವ್ವ' ಎಂಬುವು ಮಾನವನ ಮನದಲ್ಲಿ ಮೂಡಿರುವ ಎರಡು ಶಕ್ತಿಗಳೇ ಹೊರತು ವಾಸ್ತವ ಜಗತ್ತಿನಲ್ಲಿಲ್ಲ;

ಬಯಸುತಲ್+ಇಹುದು; ಇಹುದು=ಇರುವುದು; ಬರಿ=ಕೇವಲ; ದಾಸ್ಯ=ವ್ಯಕ್ತಿಯು ತನ್ನ ಇಚ್ಚೆಯಂತೆ ಬಾಳುವುದಕ್ಕಾಗದೆ, ಮತ್ತೊಬ್ಬರ ಹತೋಟಿಗೆ ಒಳಪಟ್ಟು ಬಾಳುವುದು; ಭಾವ=ಮನದ ಒಳಮಿಡಿತ;

**ದೆವ್ವ ಬಯಸುತಲಿಹುದು ಬರಿ ದಾಸ್ಯ ಭಾವ**=ಜತೆಗಾರರು/ಪ್ರಜೆಗಳು/ಸಹಮಾನವರು ತನಗೆ ಅಡಿಯಾಳುಗಳಾಗಿ ಬಾಳುತ್ತ, ತನ್ನ ಹತೋಟಿಯಲ್ಲಿಯೇ

ಇರುವಂತಾಗಬೇಕು/ತಾನು ಹೇಳಿದಂತೆ ಕೇಳಿಕೊಂಡು ಇರಬೇಕು ಎಂದು ಹಂಬಲಿಸುವವನು ಕೆಟ್ಟ ನಡೆನುಡಿಯುಳ್ಳ ವ್ಯಕ್ತಿಯಾಗಿರುತ್ತಾನೆ;

ಕ್ರೂರ=ಕರುಣೆಯಿಲ್ಲದ ವ್ಯಕ್ತಿ; ದೊರೆ=ರಾಜ;

ಕ್ರೂರ ರಾಜ=ದುಡಿಯುವ ಶ್ರಮಜೀವಿಗಳ ಹಸಿವು, ಬಡತನ, ಅಪಮಾನ, ಸಾವು ನೋವಿನ ಬಗ್ಗೆ ತುಸುವಾದರೂ ಕಾಳಜಿಯಿಲ್ಲದೆ, ತನ್ನ ಆಡಳಿತದ ಗದ್ದುಗೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಯಾರನ್ನು ಬೇಕಾದರೂ ಬಲಿ ತೆಗೆದುಕೊಳ್ಳುವ ಇಲ್ಲವೇ ಎಂತಹ ಹೀನ ಕೆಲಸವನ್ನು ಬೇಕಾದರೂ ಮಾಡುವ ಕ್ರೂರಿಯಾದ ರಾಜ;

ಸ್ವಾತಂತ್ರ್ಯದ+ಆ; ಸ್ವಾತಂತ್ರ್ಯ=ವ್ಯಕ್ತಿಯು ಯಾವುದೇ ಕಟ್ಟುಪಾಡುಗಳಿಗೆ ಇಲ್ಲವೇ ಯಾವುದೇ ವ್ಯಕ್ತಿಯ ಅಂಕೆಗೆ ಒಳಪಡದೆ, ತನಗೆ ಸರಿತೋರಿದಂತಹ ರೀತಿಯಲ್ಲಿ ಬಾಳುವುದು; ಬಯಕೆ=ಹಂಬಲ/ಆಸೆ/ಇಚ್ಚೆ; ಪ್ರಜೆ=ಜನತೆ; ಹರಣ=ಕಿತ್ತು ಕೊಳ್ಳುವುದು/ನಾಶಗೊಳಿಸುವುದು; ಮಾಡಲಿಕೆ=ಮಾಡುವುದಕ್ಕೆ;

**ಕ್ರೂರ ದೊರೆಗೂ ಇಹುದು ಸ್ವಾತಂತ್ರ್ಯದಾ ಬಯಕೆ... ಪ್ರಜೆಗಳಾ ಸ್ವಾತಂತ್ರ್ಯಹರಣ ಮಾಡಲಿಕೆ**=ಅತ್ಯಂತ ಕ್ರೂರಿಯಾದ ದೊರೆಯ ಮನದಲ್ಲಿಯೂ ಸ್ವಾತಂತ್ರ್ಯದ ಬಯಕೆಯಿದೆ. ಆದರೆ ಆ ಸ್ವಾತಂತ್ರ್ಯ ಅವನೊಬ್ಬನಿಗೆ ಮಾತ್ರ. ಅಂದರೆ **"ತಾನೊಬ್ಬ ಮಾತ್ರ ಎಲ್ಲ ರೀತಿಯಿಂದಲೂ ಸ್ವತಂತ್ರನಾಗಿರಬೇಕು. ತನ್ನನ್ನು ಹೊರತುಪಡಿಸಿ ಇನ್ನುಳಿದವರೆಲ್ಲರೂ ತನಗೆ ಗುಲಾಮರಾಗಿರಬೇಕು"** ಎಂಬ ಉದ್ದೇಶದಿಂದ ಪ್ರಜೆಗಳೆಲ್ಲರ ಸ್ವಾತಂತ್ರ್ಯವನ್ನು ಹತ್ತಿಕ್ಕಿ, ಅವರು ಸದಾಕಾಲ ಹೆದರಿಕೆ ಮತ್ತು ಆತಂಕದಿಂದ ನರಳುತ್ತಿರಲೆಂದು ತನ್ನ ಸೇನಾಬಲದಿಂದ ಪ್ರಜೆಗಳ ಮಾನ ಮತ್ತು ಪ್ರಾಣಕ್ಕೆ ಕೇಡನ್ನು ಬಗೆಯುತ್ತಿರುತ್ತಾನೆ. 'ಸ್ವಾತಂತ್ರ್ಯಹರಣ' ಎಂದರೆ ಜನರು ನೆಮ್ಮದಿಯಿಂದ ಬದುಕುವ ಹಕ್ಕನ್ನೇ ಕಸಿದುಕೊಳ್ಳುತ್ತಾನೆ;

ಪ್ರಶ್ನೆ=ಮತ್ತೊಬ್ಬರ ನಡೆನುಡಿಯಲ್ಲಿ ಕಂಡುಬರುವ ಸಂಗತಿಗಳಿಗೆ ಕಾರಣವನ್ನು ಕೇಳುವುದು; ಪರಮ=ಹೆಚ್ಚಾದ/ಅತಿಶಯವಾದ; **ಪರಮ ಸ್ವಾತಂತ್ರ್ಯ**=ವ್ಯಕ್ತಿಯ ನಡೆನುಡಿಗಳಿಗೆ ಯಾವುದೇ ಬಗೆಯ ನಿಯಂತ್ರಣವಿಲ್ಲದಿರುವುದು ಮತ್ತು ಯಾರಿಂದಲೂ ಅಡ್ಡಿ ಆತಂಕವಿಲ್ಲದಿರುವುದು;

**ಯಾರು ಪ್ರಶ್ನಿಸದಂಥ ಪರಮ ಸ್ವಾತಂತ್ರ್ಯವನು... ತನಗಷ್ಟೆ ಬೇಕೆಂದು ಅವನು ಬಯಸುವನು**=ತನ್ನ ನಡೆನುಡಿಯನ್ನು ಇಲ್ಲವೇ ತಾನು ಕೈಗೊಳ್ಳುವ ಯಾವುದೇ ಕೆಲಸವನ್ನು ಇಲ್ಲವೇ ತಾನು ಮಾಡುವ ಕಾನೂನು ಕಟ್ಟಲೆಗಳನ್ನು ಕುರಿತು ಪ್ರಜೆಗಳಲ್ಲಿ ಯಾರೊಬ್ಬರೂ ಎದುರಾಡಬಾರದು. ಪ್ರಜೆಗಳೆಲ್ಲರೂ ತನ್ನ ಆಣತಿ ಯಂತೆಯೇ ತಲೆಬಾಗಿ ನಡೆಯಬೇಕೆಂದು ಕ್ರೂರಿಯಾದ ರಾಜನು ಬಯಸುತ್ತಾನೆ;

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೬

ಕನಸು ಕಾಣುವ ಧೀರರೆಲ್ಲ ಸೋಲುಂಡಾಗ
ಸೋಲುಗಳನೊಗೆಯುವರು ಹಿಂದೆ ಮಣ್ಣಿನಲಿ
ಅವು ಮೊಳೆತು ನೆಲದಲ್ಲಿ ಚಿಗುರೊಡೆದು ಬೆಳೆಯುವುವು
ಗೆಲುವಿನಾ ಗೆಲ್ಲುಗಳು ಬಾಗಿ ಫಲಗಳಲಿ.

**ಮಾನವ ಸಮುದಾಯದ ಒಳಿತಿಗಾಗಿ ಹೋರಾಡುವ ವ್ಯಕ್ತಿಗಳ ಸೋಲು ಸೋಲಲ್ಲ. ಅವರು ಜನಮನದಲ್ಲಿ ಬಿತ್ತಿದ ಸಾಮಾಜಿಕ ಅರಿವು ಮತ್ತು ಸಾಮಾಜಿಕ ಎಚ್ಚರದ ಒಳಮಿಡಿತಗಳು ಇಂದಲ್ಲ... ನಾಳೆ... ಕ್ರಿಯೆಗಳಾಗಿ ರೂಪುಗೊಂಡು ಜನರಿಗೆ ಒಳ್ಳೆಯದನ್ನು ಮಾಡುತ್ತವೆ ಎಂಬ ಸಂಗತಿಯನ್ನು ಈ ಕವನದಲ್ಲಿ ರೂಪಕವೊಂದರ ಮೂಲಕ ಚಿತ್ರಿಸಲಾಗಿದೆ.**

'ಸಾಮಾಜಿಕ ಅರಿವು' ಎಂದರೆ 'ಲೋಕಜೀವನದಲ್ಲಿ ಯಾವುದು ಸರಿ/ಯಾವುದು ತಪ್ಪು; ಯಾವುದು ನೀತಿ/ಯಾವುದು ಅನೀತಿ; ಯಾವುದು ವಾಸ್ತವ/ಯಾವುದು ಕಲ್ಪಿತ" ಎಂಬುದನ್ನು ಒರೆಹಚ್ಚಿ ನೋಡಿ, ತನ್ನನ್ನು ಒಳಗೊಂಡಂತೆ ಜನಸಮುದಾಯಕ್ಕೆ ಒಳಿತನ್ನು ಮಾಡುವ ನುಡಿ ಮತ್ತು ದುಡಿಮೆಯ ಸ್ವರೂಪವನ್ನು ತಿಳಿಯುವುದು:

'ಸಾಮಾಜಿಕ ಎಚ್ಚರ' ಎಂದರೆ ಜಾತಿ, ಮತ, ದೇವರ ಹೆಸರಿನಲ್ಲಿ ನಡೆಯುತ್ತಿರುವ ಆಚರಣೆಗಳಿಂದ ಮಾನವರ ಬದುಕಿನಲ್ಲಿ ಉಂಟಾಗುತ್ತಿರುವ ಪರಿಣಾಮಗಳನ್ನು ಸರಿಯಾಗಿ ಗಮನಿಸಿ, ಯಾವ ಬಗೆಯ ಆಚರಣೆಗಳು ಮಾನವ ಸಮುದಾಯದ ಸಂಕಟಗಳಿಗೆ ಕಾರಣವಾಗಿವೆ ಎಂಬುದನ್ನು ಅರಿತುಕೊಂಡು, ಅಂತಹ ಆಚರಣೆಗಳಿಂದ ದೂರವಿರುವುದು.

ಕನಸು=ವ್ಯಕ್ತಿಯ ನಿದ್ರಿಸುವ ಸಮಯದಲ್ಲಿ ಕಾಣುವ ನೋಟಗಳು; ಧೀರರ್+ಎಲ್ಲ; ಧೀರ=ದಿಟ್ಟತನವುಳ್ಳವನು/ಎದೆಗಾರಿಕೆಯುಳ್ಳವನು/ಶೂರ/ವೀರ;

**ಕನಸು ಕಾಣುವ ಧೀರರು**=ಇದೊಂದು ನುಡಿಗಟ್ಟಾಗಿ ಬಳಕೆಗೊಂಡಿದೆ. ಮಾನವ ಸಮುದಾಯದಲ್ಲಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವನಕ್ಕೆ ಅತ್ಯಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯವನ್ನು ಪಡೆದು, ಎಲ್ಲರ

ಜತೆಗೂಡಿ ಒಲವು ನಲಿವು ನೆಮ್ಮದಿಯಿಂದ ಬಾಳುವಂತಾಗಲು ಏನೇನು ಮಾಡಬೇಕು ಎಂಬ ಯೋಜನೆಗಳನ್ನು ತಮ್ಮ ಮನದಲ್ಲಿ ಕಲ್ಪಿಸಿಕೊಂಡು, ಅವನ್ನು ನಿಜಜೀವನದಲ್ಲಿ ಕಾರ್ಯರೂಪಕ್ಕೆ ತರುವಾಗ, ಯಾವುದೇ ಬಗೆಯ ಅಡೆತಡೆಗಳು ಎದುರಾದರೂ ಹಿಂಜರಿಯದೆ, ಅಂಜದೆ, ಮುನ್ನುಗ್ಗಿ ಹೋರಾಡುವ ವ್ಯಕ್ತಿಗಳು;

ಸೋಲು+ಉಂಡಾಗ; ಸೋಲು=ಅಪಜಯ; ಉಣ್=ಹೊಂದು/ಪಡೆ;

**ಕನಸು ಕಾಣುವ ಧೀರರೆಲ್ಲ ಸೋಲುಂಡಾಗ**=ಮಾನವ ಸಮುದಾಯದ ಒಳಿತಿಗಾಗಿ ಯೋಜನೆಗಳನ್ನು ಮನದಲ್ಲಿ ರೂಪಿಸಿಕೊಂಡು, ಅವನ್ನು ಕಾರ್ಯರೂಪಕ್ಕೆ ತರುವಾಗ ಸಾವು ನೋವಿಗೆ ಗುರಿಯಾಗುವ ವೀರರು;

ಸೋಲುಗಳನ್+ಒಗೆಯುವರು; ಒಗೆ=ಎಸೆ/ಬಿಸಾಡು/ಬಿತ್ತು; ಮಣ್ಣು=ಭೂಮಿ;

**ಸೋಲುಗಳನೊಗೆಯುವರು ಹಿಂದೆ ಮಣ್ಣಿನಲಿ**=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೊಂಡಿವೆ. ಮಾನವ ಸಮುದಾಯದ ಒಳಿತಿಗಾಗಿ ಹೋರಾಡಿ ಸಾವು ನೋವಿಗೆ ಗುರಿಯಾಗಿ ಕಣ್ಮರೆಯಾಗುವ ವೀರರು, ತಾವು ಅಳಿದರೂ ತಮ್ಮ ಯೋಜನೆಗಳ ವಿಚಾರಗಳನ್ನು ಜನಮನದಲ್ಲಿ ಬಿತ್ತುವರು; ಅಂದರೆ ಹೋರಾಟಗಾರರು ಸಾವನ್ನಪ್ಪಿದ್ದರೂ ಅವರ ಹೋರಾಟದ ಆಶಯಗಳು ಜನಮನದಲ್ಲಿ ಜೀವಂತವಾಗಿರುತ್ತವೆ;

ಅವು=ಮಾನವ ಸಮುದಾಯಕ್ಕೆ ಒಳಿತನ್ನು ಮಾಡುವ ವಿಚಾರಗಳು; ಮೊಳೆತು=ಬೀಜದ ಕುಡಿಯೊಡೆಯುವುದು; ನೆಲದಲ್ಲಿ=ಭೂಮಿಯಲ್ಲಿ; ಚಿಗುರು+ ಒಡೆದು; ಚಿಗುರು=ಚಿಕ್ಕ ಎಲೆಗಳು; ಒಡೆ=ಬಿರಿ/ಮೂಡು; ಚಿಗುರೊಡೆದು= ಚಿಗುರೆಲೆಗಳು ಮೂಡಿ; ಗೆಲುವು=ಜಯ; ಗೆಲ್ಲು=ಕೊಂಬೆ/ರೆಂಬೆ; ಬಾಗಿ=ಬಗ್ಗಿ; ಫಲ=ಹೂ ಕಾಯಿ ಹಣ್ಣುಗಳಿಂದ ತುಂಬಿ ಕಂಗೊಳಿಸುವುದು;

**ಅವು ಮೊಳೆತು ನೆಲದಲ್ಲಿ ಚಿಗುರೊಡೆದು ಬೆಳೆಯುವುವು... ಗೆಲುವಿನಾ ಗೆಲ್ಲುಗಳು ಬಾಗಿ ಫಲಗಳಲಿ**=ಈ ನುಡಿಗಳು ರೂಪಕವಾಗಿ ಬಳಕೆಗೊಂಡಿವೆ. ಹದವಾದ ಮಣ್ಣಿನಲ್ಲಿ ನೆಟ್ಟ ಬೀಜ ಮೊಳಕೆಯೊಡೆದು, ಚಿಗುರಾಗಿ, ಗಿಡವಾಗಿ, ಮರವಾಗಿ ಬೆಳೆದು, ಹೂವು ಕಾಯಿ ಹಣ್ಣುಗಳ ಬಾರಕ್ಕೆ ಕೊಂಬೆರೆಂಬೆಗಳು ಬಾಗಿ ಬಳುಕಿ ಕಂಗೊಳಿಸುತ್ತ ಯಾವ ರೀತಿಯಲ್ಲಿ ಜನರ ಉಪಯೋಗಕ್ಕೆ ಬರುತ್ತವೆಯೋ ಅಂತೆಯೇ ಹೋರಾಟಗಾರರ ಮನದ ಚಿಂತನೆಗಳು ಮತ್ತು ಯೋಜನೆಗಳು ಜನಮನದಲ್ಲಿ ನೆಲೆಸಿ ಮುಂದಿನ ತಲೆಮಾರುಗಳ ಜನರಿಗೆ ಪ್ರಯೋಜನ ಕಾರಿಯಾಗಿ ಒಳಿತನ್ನು ಉಂಟುಮಾಡುತ್ತವೆ.

ಕಾಲಕ್ರಮೇಣ ದುಡಿಯುವ ವರ್ಗದ ಶ್ರಮಜೀವಿಗಳ ಮನದಲ್ಲಿ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಮೂಡಿಸಿ, ಜಾತಿ, ಮತ, ದೇವರುಗಳ ಹೆಸರಿನಲ್ಲಿ

ಸಿರಿವಂತರು ಮತ್ತು ಆಡಳಿತಗಾರರು ಮಾಡುತ್ತಿರುವ ವಂಚನೆ, ಸುಲಿಗೆ ಮತ್ತು ಕ್ರೂರತನದ ಹಲ್ಲೆಯ ಎದುರು ಹೋರಾಡಿ ಜಯಗಳಿಸಿ, ಮಾನವ ಸಮುದಾಯಕ್ಕೆ ಒಲವು ನಲಿವು ನೆಮ್ಮದಿಯ ಬಾಳನ್ನು ತಂದುಕೊಡಬಲ್ಲ ಕಸುವನ್ನು ಜನಸಮುದಾಯಕ್ಕೆ ನೀಡುತ್ತವೆ.

ಈ ಕವನದಲ್ಲಿ ಹೇಳಿರುವ ಸಂಗತಿಗಳ ಹಿನ್ನೆಲೆಯಲ್ಲಿ ಬಸವಣ್ಣನವರ, ಜ್ಯೋತಿರಾವ ಪುಲೆ ಮತ್ತು ಸಾವಿತ್ರಿ ಬಾಯಿ ಪುಲೆ ದಂಪತಿಗಳ ಮತ್ತು ಅಂಬೇಡ್ಕರ್ ಅವರ ಜೀವನದ ಸೋಲುಗೆಲುವುಗಳನ್ನು ನಾವು ಒರೆಹಚ್ಚಿ ನೋಡಬಹುದು.

ಹನ್ನೆರಡನೆಯ ಶತಮಾನದ ಕನ್ನಡ ನಾಡಿನಲ್ಲಿ ಕೆಳಜಾತಿಯವರು ಎಂಬ ಒಂದು ಕಾರಣದಿಂದಲೇ ವಿದ್ಯೆ, ಆಡಳಿತ ಮತ್ತು ಸಂಪತ್ತಿನಿಂದ ವಂಚಿತರಾಗಿದ್ದ ಜನಸಮುದಾಯದ ಪರವಾಗಿ ಹೋರಾಡಿ, ನಾಡಿನ ಜನರೆಲ್ಲರನ್ನು ಮೇಲು ಕೀಳು ಎಂದು ತಾರತಮ್ಯ ಮಾಡದೆ, ಸಮಾನತೆಯ ನೆಲೆಗೆ ತರಲು ಹೋರಾಡಿದ ಬಸವಣ್ಣನವರು ಕಲ್ಯಾಣದಲ್ಲಿ ನಡೆದ ಕ್ರಾಂತಿಯ ಸಮಯದಲ್ಲಿ ನಡುಹರೆಯದಲ್ಲಿಯೇ ಸಾವನ್ನಪ್ಪಿದರು.

ಹತ್ತೊಂಬತ್ತನೆಯ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ಕೆಳಜಾತಿಯವರಿಗೆ, ಕೆಳವರ್ಗದವರಿಗೆ ಮತ್ತು ಎಲ್ಲಾ ಜಾತಿ ಮತದ ಹೆಂಗಸರಿಗೆ ವಿದ್ಯೆಯನ್ನು ನೀಡಿ, ಅವರ ಬದುಕನ್ನು ಹಸನುಗೊಳಿಸಬೇಕೆಂದು ಹೋರಾಡಿದ ಜ್ಯೋತಿರಾವ ಪುಲೆ ಮತ್ತು ಸಾವಿತ್ರಿಬಾಯಿ ಪುಲೆ ದಂಪತಿಗಳು ತಮ್ಮ ಆಸ್ತಿ ಮತ್ತು ಆದಾಯವೆಲ್ಲವನ್ನೂ ಜನಹಿತಕ್ಕಾಗಿ ಬಳಸಿ, ತಾವು ಬಡತನದ ಬೇಗೆಯಲ್ಲಿಯೇ ಬೆಂದು ನೊಂದರು.

ಇಪ್ಪತ್ತನೆಯ ಶತಮಾನದಲ್ಲಿ ಕೋಟಿಗಟ್ಟಲೆ ದಲಿತರ ಮತ್ತು ಶೂದ್ರರ ಹಸಿವು, ಬಡತನ ಮತ್ತು ಅಪಮಾನದ ಬದುಕನ್ನು ತೊಲಗಿಸಲು ಇಂಡಿಯಾ ದೇಶದ ಉದ್ದಗಲದಲ್ಲಿ ಹೋರಾಡಿದ ಅಂಬೇಡ್ಕರ್ ಅವರು ತಮ್ಮ ಬದುಕನ್ನೇ ಜನಸಮುದಾಯದ ಒಳಿತಿಗಾಗಿ ಮುಡಿಪಾಗಿಟ್ಟಿದ್ದರು.

ಮೇಲು ಕೀಳಿನ ಜಾತಿ ಪದ್ಧತಿ ಮತ್ತು ಬಡವ ಬಲ್ಲಿದ ಎಂಬ ವರ್ಗ ತಾರತಮ್ಯದ ಸಮಾಜದಲ್ಲಿ ಇವರೆಲ್ಲರೂ ತಮ್ಮ ಜೀವಿತ ಕಾಲದಲ್ಲಿ ಅತಿ ಹೆಚ್ಚಿನ ನೋವು, ಅಪಮಾನ ಮತ್ತು ಸಂಕಟಕ್ಕೆ ಒಳಗಾಗಿದ್ದರು. ಇಂದು ಈ ಹೋರಾಟಗಾರರು ಕಣ್ಮರೆ ಯಾಗಿದ್ದರೂ, ಅಂದು ಇವರು ಆಡಿದ ನುಡಿಗಳು ಮತ್ತು ಮಾಡಿದ ಕಾರ್ಯಗಳು ನೂರಾರು ವರುಶಗಳು ಉರುಳಿದರೂ ಕೆಳವರ್ಗದ ಮತ್ತು ಕೆಳಜಾತಿಯ ಕೋಟಿ ಗಟ್ಟಲೆ ಜನರ ಮನದಲ್ಲಿ ನೆಲೆಗೊಂಡು, ಇಂದಿಗೂ ಎಂದೆಂದಿಗೂ ಜನರು ತಮ್ಮ ಬದುಕನ್ನು ಉತ್ತಮವಾಗಿ ರೂಪಿಸಿಕೊಳ್ಳಲು ಪ್ರೇರಣೆಯನ್ನು ನೀಡುತ್ತಲೇ ಇರುತ್ತವೆ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

# ೧೦

**ಹಣತೆ 'ಅಣ್ಣಾ' ಎಂದು ಗಾಜಿನಾ ದೀಪವನು**
**ಕರೆಯೆ ಹೇಳಿತು ದೀಪ ಕೋಪವನು ತಾಳಿ**
**'ಹೀನಕುಲ ಸಂಜಾತ, ನೀನು ಮಣ್ಣಿನ ಹಣತೆ**
**ನನ್ನನಣ್ಣಾ ಎಂದು ಕರೆಯಬೇಡಿನ್ನು'**

ಮತ್ತೆ ಸಂಜೆಯ ವೇಳೆ ಚಂದ್ರಮನು ಉದಯಿಸಲು
ಮೃದುವಾದ ತಂಗದಿರು ಜಗವ ಬೆಳಗಿಸಿತು
ಮುಖದಲ್ಲಿ ಒಣನಗುವ ತಂದು ಗಾಜಿನ ದೀಪ
**'ಅಣ್ಣ.... ಬಾರ'** ಎಂದು ಚಂದ್ರಮನ ಕರೆದಿತ್ತು.

**ನಿತ್ಯ ಜೀವನದ ವ್ಯವಹಾರಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಸಾಮಾಜಿಕ ಅಂತಸ್ತಿನಲ್ಲಿ ತನಗಿಂತ ಕಡಿಮೆ ಇರುವವರನ್ನು ಕೀಳಾಗಿ ಕಾಣುತ್ತಾನೆ. ತನಗಿಂತ ಮೇಲಿನವರನ್ನು ಹಿರಿದಾಗಿ ಕಾಣುತ್ತಾನೆ ಎಂಬ ವಾಸ್ತವದ ಸಂಗತಿಯನ್ನು ರೂಪಕವೊಂದರ ಮೂಲಕ ಈ ಕವನದಲ್ಲಿ ಚಿತ್ರಿಸಲಾಗಿದೆ.**

**'ಸಾಮಾಜಿಕ ಅಂತಸ್ತು'** ಎಂದರೆ ವ್ಯಕ್ತಿಯು ಹುಟ್ಟಿರುವ ಜಾತಿ ಮತ್ತು ಮತ; ಹೊಂದಿರುವ ಆಸ್ತಿ ಒಡವೆ ವಸ್ತು; ಪಡೆದಿರುವ ಆಡಳಿತದ ಗದ್ದುಗೆಯನ್ನು ಅಳತೆಗೋಲನ್ನಾಗಿ ಮಾಡಿಕೊಂಡು ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯ ಮಟ್ಟವನ್ನು ಗೊತ್ತುಪಡಿಸುವುದು.

ಈ ಮಾನದಂಡದಿಂದಲೇ ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯು ಮೇಲುಜಾತಿ/ನಡುವಣ ಜಾತಿ/ಕೀಳುಜಾತಿ ಎಂಬ ನೆಲೆಯಲ್ಲಿ; ಅತಿ ಸಿರಿವಂತ/ ಸಿರಿವಂತ/ಸಾಮಾನ್ಯ ಅನುಕೂಲವಂತ/ಬಡವ ಎಂಬ ಸಂಪತ್ತಿನ ನೆಲೆಯಲ್ಲಿ; ಆಡಳಿತದ ಬೇರೆ ಬೇರೆ ರಂಗಗಳಲ್ಲಿ ಹುದ್ದೆಯಲ್ಲಿ ಇರುವವನು/ಯಾವುದೇ ಹುದ್ದೆಯಲ್ಲಿಯೂ ಇಲ್ಲದವನು ಎಂಬ ನೆಲೆಯಲ್ಲಿ ಕಾಣಿಸಿಕೊಳ್ಳುತ್ತಾನೆ. ಈ ನೆಲೆಗಳಿಂದಲೇ ವ್ಯಕ್ತಿಗೆ ಸಾಮಾಜಿಕವಾದ ಸ್ಥಾನಮಾನ ಮತ್ತು ಅವಕಾಶಗಳು ದೊರೆಯುತ್ತವೆ ಇಲ್ಲವೇ ತಪ್ಪಿಹೋಗುತ್ತವೆ.

ಹಣತೆ=ಮಣ್ಣಿನ ದೀಪ/ಸೊಡರು; ಅಣ್ಣ=ಗಂಡಸನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಗಾಜಿನ ದೀಪ=ಬೆಳಗುತ್ತಿರುವ ದೀಪದ ಕುಡಿಯು ಗಾಳಿ ಬೀಸಿದಾಗ ನಂದಿಹೋಗದಂತೆ ಅದರ ಸುತ್ತಲೂ ಗಾಜನ್ನು ಅಳವಡಿಸಿ ಮಾಡಿರುವ ದೀಪ;

ಕರೆ=ಕೂಗು/ಮಾತನಾಡು;

**ಹಣತೆ 'ಅಣ್ಣಾ' ಎಂದು ಗಾಜಿನಾ ದೀಪವನು ಕರೆಯೆ**=ಮಣ್ಣಿನ ದೀಪವು ಗಾಜಿನ ದೀಪವನ್ನು **'ಅಣ್ಣಾ'** ಎಂದು ಪ್ರೀತಿಯಿಂದ ಕರೆದಾಗ ;

ಕೋಪ=ಸಿಟ್ಟು; ತಾಳು=ಹೊಂದಿ; ಹೀನ=ಕೀಳಾದ; ಕುಲ=ಜಾತಿ/ಕುಲ; ಹೀನಕುಲ=ಕೆಳಜಾತಿ; ಸಂಜಾತ=ಹುಟ್ಟಿದವನು; ಹೀನಕುಲ ಸಂಜಾತ=ಕೀಳು ಜಾತಿಯವನು/ಸಾಮಾಜಿಕವಾಗಿ ಕೆಳಹಂತದವನು;

ನನ್ನನ್+ಅಣ್ಣಾ; ಕರೆಯಬೇಡ+ಇನ್ನು; ಇನ್ನು=ಇನ್ನು ಮುಂದೆ;

**'ಹೀನಕುಲ ಸಂಜಾತ ನೀನು ಮಣ್ಣಿನ ಹಣತೆ ನನ್ನನಣ್ಣಾ ಎಂದು ಕರೆಯ ಬೇಡಿನ್ನು'** = ಗಾಳಿ ಬೀಸಿದಾಗ ನಂದಿಹೋಗುವ ಮಣ್ಣಿನ ದೀಪಕ್ಕಿಂತಲೂ **'ನಾನು ದೊಡ್ಡವನು/ನಾನು ಉತ್ತಮ'** ಎಂಬ ನಿಲುವನ್ನು ಮತ್ತು ಅಹಂಕಾರವನ್ನು ಗಾಜಿನ ದೀಪ ಹೊಂದಿದೆ; ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಪ್ರತಿಯೊಬ್ಬ ವ್ಯಕ್ತಿಯು ತನಗಿಂತ ಸಾಮಾಜಿಕ ಅಂತಸ್ತಿನಲ್ಲಿ ಕೆಳಮಟ್ಟದಲ್ಲಿರುವ ವ್ಯಕ್ತಿಯೊಡನೆ ಆತ್ಮೀಯವಾದ ನಂಟನ್ನಾಗಲಿ ಇಲ್ಲವೇ ಸರಿಸಮಾನತೆಯ ಗೆಳೆತನದ ಒಡನಾಟವನ್ನಾಗಲಿ ಹೊಂದಲು ಇಲ್ಲವೇ ಮುಂದುವರಿಸಲು ಇಚ್ಚಿಸುವುದಿಲ್ಲ; ಅಂತಹವರಿಂದ ಮಾನಸಿಕವಾಗಿ ದೂರವಿರಲು ಪ್ರಯತ್ನಿಸುತ್ತಾನೆ ಎಂಬ ತಿರುಳನ್ನು ಈ ನುಡಿಗಳು ಸೂಚಿಸುತ್ತಿವೆ;

ಮತ್ತೆ=ಬಳಿಕ/ನಂತರ/ಆಮೇಲೆ; **ಸಂಜೆ=ಸಾಯಂಕಾಲ; ಮತ್ತೆ ಸಂಜೆ**= ಮತ್ತೊಂದು ದಿನ ಸಾಯಂಕಾಲದ ಸಮಯದಲ್ಲಿ;

ಚಂದ್ರಮ=ಚಂದ್ರ; ಉದಯ=ಹುಟ್ಟು; ಮೃದು=ಕೋಮಲವಾದ/ ಪ್ರಶಾಂತವಾದ; ತಣ್ಣನೆಯ+ಕದಿರು; ತಣ್ಣನೆ=ತಂಪಾಗಿರುವ; ಕದಿರು=ಕಿರಣ; ತಂಗದಿರು=ಬೆಳುದಿಂಗಳು; ಜಗ=ಪ್ರಪಂಚ/ಲೋಕ ; ಬೆಳಗು=ಹೊಳೆ/ಪ್ರಕಾಶಿಸು;

**ಮತ್ತೆ ಸಂಜೆಯ ವೇಳೆ ಚಂದ್ರಮನು ಉದಯಿಸಲು ಮೃದುವಾದ ತಂಗದಿರು ಜಗವ ಬೆಳಗಿಸಿತು**=ಮತ್ತೊಂದು ದಿನ ಸಂಜೆ ಸಮಯದಲ್ಲಿ ಚಂದ್ರನು ಮೂಡಿ ಬರಲು, ತಂಪಾದ ಬೆಳದಿಂಗಳು ಎಲ್ಲೆಡೆಯಲ್ಲಿಯೂ ಹರಡಿ ಕಂಗೊಳಿಸತೊಡಗಿತು;

ಒಣನಗು=ತೋರಿಕೆಯ ನಗು/ವ್ಯಕ್ತಿಯ ಮನಸ್ಸಿನಲ್ಲಿ ಮತ್ತೊಬ್ಬನ ಬಗ್ಗೆ

ಯಾವುದೇ ಒಲವು ನಲಿವು ಇಲ್ಲದಿದ್ದರೂ, ಅವನನ್ನು ಮೆಚ್ಚಿಸಿಕೊಂಡು ನಂಟನ್ನು ಇಲ್ಲವೇ ಗೆಳೆತನವನ್ನು ಪಡೆಯುವುದಕ್ಕಾಗಿ ಬೀರುವ ನಗು; ಬಾರ=ಬನ್ನಿರಿ; ಕರೆದು+ಇತ್ತು; ಕರೆದಿತ್ತು=ಮಾತನಾಡಿಸಿತು;

**ಮುಖದಲ್ಲಿ ಒಣನಗುವ ತಂದು ಗಾಜಿನ ದೀಪ 'ಅಣ್ಣಾ ಬಾರಾ' ಎಂದು ಚಂದ್ರಮನ ಕರೆದಿತ್ತು**=ತನಗಿಂತ ಸಾವಿರಾರುಪಟ್ಟು ಹೆಚ್ಚು ಪ್ರಕಾಶಮಾನವಾಗಿ ಬೆಳಗುತ್ತಿರುವ ಚಂದ್ರನ ಬಗ್ಗೆ ಮನದೊಳಗೆ ಯಾವುದೇ ಬಗೆಯ ಪ್ರೀತಿಯಿಲ್ಲದಿದ್ದರೂ, ದೊಡ್ಡವನಾದ ಚಂದ್ರನನ್ನು ಮೆಚ್ಚಿಸಿಕೊಳ್ಳುವುದಕ್ಕಾಗಿ ಗಾಜಿನ ದೀಪವು 'ಅಣ್ಣಾ... ಬಾರಾ' ಎಂದು ಕರೆಯುತ್ತಿದೆ ;

ಪ್ರತಿನಿತ್ಯದ ವ್ಯವಹಾರಗಳಲ್ಲಿ ವ್ಯಕ್ತಿಯು ಮೇಲುಜಾತಿಯವರ/ಸಿರಿವಂತರ/ ಆಡಳಿತದ ಉನ್ನತ ಗದ್ದುಗೆಯಲ್ಲಿ ಇರುವವರ ಮುಂದೆ ಅತ್ಯಂತ ವಿನಯದಿಂದ ನಡೆದುಕೊಂಡು ಅವರೊಡನೆ ನಂಟನ್ನು ಪಡೆಯಲು ಹಂಬಲಿಸುವ ಮತ್ತು ಕೆಳಜಾತಿಯವರನ್ನು/ಬಡವರನ್ನು/ಆಡಳಿತದ ಗದ್ದುಗೆಯಿಲ್ಲದವರನ್ನು ಕಡೆಗಣಿಸಿ, ಅವರಿಂದ ದೂರವಿರಲು ಬಯಸುವ ಇಬ್ಬಗೆಯ ನಡೆನುಡಿಯನ್ನು ಗಾಜಿನ ದೀಪದ ಮಾತಿನ ರೂಪಕದ ಮೂಲಕ ಚಿತ್ರಿಸಲಾಗಿದೆ.

ತಾರತಮ್ಯದಿಂದ ಕೂಡಿದ ಇಂತಹ ಇಬ್ಬಗೆಯ ನಡೆನುಡಿಯು ನಮ್ಮನ್ನೂ ಒಳಗೊಂಡಂತೆ ಎಲ್ಲ ಕಾಲದಲ್ಲಿಯೂ ಎಲ್ಲ ವ್ಯಕ್ತಿಗಳಲ್ಲಿಯೂ ಒಂದಲ್ಲ ಒಂದು ಪ್ರಮಾಣದಲ್ಲಿ ಇರುವ ವಾಸ್ತವವನ್ನು ಈ ಕವನದಲ್ಲಿನ ಸಂಗತಿಯು ಸೂಚಿಸುತ್ತಿದೆ;

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೧೧.

ತರ್ಕ ತುಂಬಿದ ಮನಸು ಎರಡು ಅಲಗಿನ ಕತ್ತಿ
ಅದನು ಹಿಡಿದಿಹ ಕೈಯು ರಕ್ತಸಿಕ್ತ
ತರ್ಕವೇ ಸರ್ವಸ್ವವೆಂಬುದನು ಮರೆತಾಗ
ತರ್ಕಕೆಟುಕದ ಪ್ರೀತಿ ನಿನಗೆ ವ್ಯಕ್ತ.

**"ಇತರರು ಹೇಳುತ್ತಿರುವುದೆಲ್ಲವೂ ತಪ್ಪು. ನಾನು ಹೇಳುತ್ತಿರುವುದೇ ಸರಿ." ಎಂಬ ನಿಲುವನ್ನು ಹೊಂದಿರುವ ವ್ಯಕ್ತಿಯ ಮನಸ್ಸು ಕ್ರೂರವಾಗಿರುತ್ತದೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

**'ಮನಸ್ಸು ಕ್ರೂರವಾಗಿರುವುದು'** ಎಂದರೆ ಇತರರನ್ನು ವಂಚಿಸುವ, ಸುಲಿಗೆ ಮಾಡುವ, ಸಾವು ನೋವಿಗೆ ಗುರಿಮಾಡುವ ಕೆಟ್ಟ ಉದ್ದೇಶಗಳಿಂದ ಕೂಡಿರುವ ಮನಸ್ಸು;

ತರ್ಕ= ಚರ್ಚೆ/ವಾದ; ತುಂಬು=ಹೆಚ್ಚಾಗಿರುವುದು/ಬಹಳವಾಗಿರುವುದು;

**ತರ್ಕ ತುಂಬಿದ ಮನಸು**=ತನ್ನ ನಿಲುವೇ ಸರಿ/ತನ್ನ ವಿಚಾರಗಳೇ ಸಮಂಜಸ/ಬೇರೆಯವರ ವಿಚಾರಗಳೆಲ್ಲವೂ ಪೊಳ್ಳು ಎಂಬ ಒಳಮಿಡಿತಗಳಿಂದ ಕೂಡಿರುವ ಮನಸ್ಸು;

ಅಲಗು=ಲೋಹದಿಂದ ಮಾಡಿರುವ ಚಾಕು, ಕತ್ತಿ ಮುಂತಾದ ಹತಾರಗಳ ಹರಿತವಾದ ಅಂಚು; ಕತ್ತಿ=ಉದ್ದನೆಯ ಹರಿತವಾದ ಅಂಚು ಮತ್ತು ಮೊನೆಯುಳ್ಳ ಹತಾರ;

ಎರಡು ಅಲಗಿನ ಕತ್ತಿ=ಉದ್ದನೆಯ ಕತ್ತಿಯ ಎರಡು ಪಕ್ಕದ ಅಂಚುಗಳು ಹರಿತವಾಗಿರುತ್ತವೆ. ಇದರಿಂದಾಗಿ ಯಾವ ಕಡೆಯಿಂದ ಬೇಕಾದರೂ ಕತ್ತಿಯನ್ನು ಬೀಸಿ ಎದುರಾಳಿಯನ್ನು ಗಾಸಿಗೊಳಿಸಬಹುದು; ಹಿಡಿದು+ಇಹ; ಇಹ=ಇರುವ; ರಕ್ತ=ನೆತ್ತರು; ಸಿಕ್ತ=ಒದ್ದೆಯಾಗಿರುವುದು; ರಕ್ತಸಿಕ್ತ=ರಕ್ತ ಮೆತ್ತಿಕೊಂಡಿರುವುದು/ಬಳಿದುಕೊಂಡಿರುವುದು;

**ತರ್ಕ ತುಂಬಿದ ಮನಸು ಎರಡು ಅಲಗಿನ ಕತ್ತಿ... ಅದನು ಹಿಡಿದಿಹ ಕೈಯು ರಕ್ತಸಿಕ್ತ**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. 'ತನ್ನ ಜಾತಿಯೇ /

ತನ್ನ ಧರ್ಮವೇ/ತನ್ನ ದೇವರೇ ದೊಡ್ಡದು' ಎಂದು ವಾದ ಮಾಡುವ ವ್ಯಕ್ತಿಯ ಮನಸ್ಸು, ತನ್ನದಲ್ಲದ ಜಾತಿಯ/ಧರ್ಮದ/ದೇವರನ್ನು ಪೂಜಿಸುವ ಜನರ ಬಗ್ಗೆ ತೀವ್ರವಾದ ತಿರಸ್ಕಾರ ಮತ್ತು ಹಗೆತನವನ್ನು ಹೊಂದಿರುತ್ತದೆ. ಇದಕ್ಕೆ ಮೂಲ ಕಾರಣವೇನೆಂದರೆ, "ಭೂಮಿಯ ಒಡೆತನ, ಒಡವೆ ವಸ್ತು ಮತ್ತು ಆಡಳಿತದ ಗದ್ದುಗೆಯು ತಮ್ಮ ತಮ್ಮ ಜಾತಿ/ಧರ್ಮದವರಿಗೆ ಮಾತ್ರ ದೊರೆಯಬೇಕು ಹಾಗೂ ತಮ್ಮವರಲ್ಲಿಯೇ ಉಳಿಯಬೇಕು" ಎಂಬ ಉದ್ದೇಶ.

ಈ ಉದ್ದೇಶವನ್ನು ಈಡೇರಿಸಿಕೊಳ್ಳಲು ಜಾತಿ/ಧರ್ಮ/ದೇವರನ್ನು ಹತಾರ ಗಳನ್ನಾಗಿ ಬಳಸುತ್ತಾರೆ. ಆದ್ದರಿಂದಲೇ ಹಿಂದಿನ ಕಾಲದಿಂದಲೂ ಇಂದಿನವರೆಗೂ ಜಾತಿ/ಧರ್ಮ/ದೇವರ ಹೆಸರಿನಲ್ಲಿ ನಡೆದಿರುವ ಮತ್ತು ನಡೆಯುತ್ತಿರುವ ಕಲಹ ಗಳಲ್ಲಿ ಹರಿಯುತ್ತಿರುವ ಮಾನವ ರಕ್ತದ ಪ್ರಮಾಣ, ರಾಜ್ಯದ ಪ್ರಾಂತ್ಯ ವಿಸ್ತರಣೆಗಾಗಿ ರಾಜರ ನಡುವೆ ನಡೆದ ಕಾಳೆಗಗಳಲ್ಲಿ ಹರಿದ ರಕ್ತದ ಪ್ರಮಾಣಕ್ಕಿಂತ ಹೆಚ್ಚಾಗಿದೆ.

ಯಾವುದೇ ಒಂದು ಜಾತಿ/ಧರ್ಮ/ದೇವರ ಬಗ್ಗೆ ಯಾರಾದರೂ ತುಸು ಟೀಕೆಯನ್ನು ಮಾಡಿದರೆ 'ಅವರ ನಾಲಗೆಯನ್ನು/ಕಯ್ ಕಾಲುಗಳನ್ನು/ ತಲೆಯನ್ನು ಕತ್ತರಿಸಿದವರಿಗೆ ಕೋಟಿಗಟ್ಟಲೆ ರೂಪಾಯಿಗಳ ಬಹುಮಾನವನ್ನು ನೀಡುತ್ತೇವೆ' ಎಂದು ಪ್ರಕಟಣೆಯನ್ನು ನೀಡುವ ಮತ್ತು ಜಾತಿ/ಧರ್ಮ/ದೇವರ ಹೆಸರಿನಲ್ಲಿ ಸುಳ್ಳು ಆರೋಪಗಳನ್ನು ಮಾಡಿ, ಅನ್ಯ ಪಂಗಡದ ಜನರನ್ನು ಕೊಲ್ಲುವವರನ್ನು 'ದೊಡ್ಡ ವೀರರು' ಎಂದು ಕೊಂಡಾಡುವ ವಿದ್ಯಮಾನಗಳು ಜಗತ್ತಿನ ಎಲ್ಲ ದೇಶಗಳಲ್ಲಿಯೂ ಕಂಡುಬರುತ್ತಿವೆ.

ಜಗತ್ತಿನಲ್ಲಿರುವ ಧರ್ಮಗಳೆಲ್ಲವೂ ಪ್ರೀತಿ ಮತ್ತು ಕರುಣೆಯನ್ನು ನುಡಿಗಳ ರೂಪದಲ್ಲಿ ಹೇಳಿದರೂ, ನಿತ್ಯ ಜೀವನದ ವ್ಯವಹಾರಗಳಲ್ಲಿ ಮತ್ತೊಂದು ಧರ್ಮದ ನಾಶಕ್ಕಾಗಿಯೇ ಪಣತೊಟ್ಟಿರುತ್ತವೆ. ಆದ್ದರಿಂದಲೇ ಚರಿತ್ರೆಯ ಬೇರೆ ಬೇರೆ ಕಾಲಮಾನಗಳಲ್ಲಿ ಒಂದು ಧರ್ಮದ ದೇವ ಮಂದಿರಗಳನ್ನು ಮತ್ತೊಂದು ಧರ್ಮದವರು ಕೆಡಹುವ ಮತ್ತು ಅದೇ ಜಾಗದಲ್ಲಿ ತಮ್ಮ ದೇವ ಮಂದಿರಗಳನ್ನು ಕಟ್ಟುವ ಹಗೆತನದ ಕ್ರಿಯೆಗಳು ಕಂಡುಬರುತ್ತಿವೆ.

ಜಾತಿ/ಧರ್ಮ/ದೇವರ ನೆಲೆಯಲ್ಲಿ ಕೋಟಿಗಟ್ಟಲೆ ಶ್ರೀಸಾಮಾನ್ಯರು ತಮ್ಮ ಪಾಡಿಗೆ ತಾವು ಎಲ್ಲರೊಡನೆ ಹೊಂದಿಕೊಂಡು ಒಲವು ನಲಿವು ನೆಮ್ಮದಿಯಿಂದ ಬಾಳುತ್ತಿರುತ್ತಾರೆ. ಆದರೆ ಜಾತಿ/ಧರ್ಮ/ದೇವರ ಹೆಸರಿನಲ್ಲಿ ಒಕ್ಕೂಟಗಳನ್ನು ಕಟ್ಟಿಕೊಂಡು ವ್ಯವಹರಿಸುವ ಕೆಲವೇ ವ್ಯಕ್ತಿಗಳ ಮನಸ್ಸು ವಂಚನೆ, ಸುಲಿಗೆ ಮತ್ತು ಕ್ರೂರತನದ ನಡೆನುಡಿಗಳಿಂದ ಕೂಡಿರುತ್ತದೆ. ಇಂತಹ ಒಕ್ಕೂಟಗಳಲ್ಲಿರುವ ವ್ಯಕ್ತಿಗಳಲ್ಲಿ ಅಕ್ಕರದ ವಿದ್ಯೆ ಮತ್ತು ಸಿರಿವಂತಿಕೆಯು ಹೆಚ್ಚಾದಂತೆಲ್ಲಾ ಕ್ರೂರತನದ

ನಡೆನುಡಿಗಳು ಇನ್ನು ಹೆಚ್ಚಾಗಿ , ಮಾನವ ಸಮುದಾಯ ನಿರಂತರವಾದ ಸಾವು ನೋವಿಗೆ ಗುರಿಯಾಗಿ ನರಳುತ್ತಿದೆ;

ಸರ್ವಸ್ವ+ಎಂಬುದನು; ಸರ್ವಸ್ವ=ಎಲ್ಲ/ಸಮಸ್ತ; ತರ್ಕವೇ ಸರ್ವಸ್ವ=ನನ್ನ ಜಾತಿ/ನನ್ನ ಧರ್ಮ/ನನ್ನ ದೇವರೇ ದೊಡ್ಡದು ಎಂಬ ಮೋಹ/ಅಹಂಕಾರ; ಎಂಬುದನು=ಎನ್ನುವುದನ್ನು; ಮರೆ=ಕಡೆಗಣಿಸು/ತಿರಸ್ಕರಿಸು; ತರ್ಕಕೆ+ಎಟುಕದ; ಎಟುಕು=ಸಿಗುವುದು/ದೊರೆಯುವುದು; ಪ್ರೀತಿ=ಒಲವು/ಅನುರಾಗ/ಅಕ್ಕರೆ;

**ತರ್ಕಕೆ ಎಟುಕದ ಪ್ರೀತಿ**=ಪ್ರೀತಿ ಎಂಬುದಕ್ಕೆ ಜಾತಿ/ಧರ್ಮ/ದೇವರ ನಂಟು ಇರುವುದಿಲ್ಲ. ವ್ಯಕ್ತಿಯು ತಾನು ಪ್ರೀತಿಸುವ ವ್ಯಕ್ತಿಯನ್ನು ಜಾತಿ/ಧರ್ಮ/ದೇವರ ಹಿನ್ನೆಲೆಯಲ್ಲಿ ಗುರುತಿಸದೆ, ತನ್ನಂತೆಯೇ ಒಂದು ಮಾನವ ಜೀವಿಯೆಂದು ಸರಿಸಮಾನವಾದ ನೆಲೆಯಲ್ಲಿ ಕಾಣುತ್ತಾನೆ. ಪ್ರೀತಿ ಎನ್ನುವುದು ವ್ಯಕ್ತಿಗಳ ಮನಸ್ಸನ್ನು ಒಂದುಗೂಡಿಸುವ ಮತ್ತು ಎಲ್ಲರ ಒಳಿತಿಗಾಗಿ ಒಲವು, ಕರುಣೆ ಮತ್ತು ಗೆಳೆತನದಿಂದ ನಂಟನ್ನು ಬೆಳೆಸುವ ನಡೆನುಡಿಯಾಗಿರುತ್ತದೆ;

ವ್ಯಕ್ತ=ಚೆನ್ನಾಗಿ ಕಾಣುತ್ತದೆ/ಗೋಚರಿಸುತ್ತದೆ;

**ತರ್ಕವೇ ಸರ್ವಸ್ವವೆಂಬುದನು ಮರೆತಾಗ... ತರ್ಕಕೆಟುಕದ ಪ್ರೀತಿ ನಿನಗೆ ವ್ಯಕ್ತ**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ವ್ಯಕ್ತಿಯು ತನ್ನ ಜಾತಿ/ಧರ್ಮ/ದೇವರ ಬಗೆಗಿನ ಮೋಹ ಇಲ್ಲವೇ ಅಹಂಕಾರವನ್ನು ಬಿಟ್ಟರೆ, ಆಗ ಎಲ್ಲರೊಡನೆ ಪ್ರೀತಿಯಿಂದ ನಡೆದುಕೊಳ್ಳಬೇಕೆಂಬ ಅರಿವನ್ನು ಪಡೆಯುತ್ತಾನೆ. ಇಂತಹ ಅರಿವು ಮೂಡುತ್ತಿದ್ದಂತೆಯೇ ಸಹಮಾನವರ ಜತೆಯಲ್ಲಿ ಒಲವು ನಲಿವು ನೆಮ್ಮದಿಯಿಂದ ಜತೆಗೂಡಿ ಬಾಳುವಂತಹ ಒಳ್ಳೆಯ ನಡೆನುಡಿಗಳನ್ನು ವ್ಯಕ್ತಿಯು ಪ್ರಯತ್ನಪೂರ್ವಕವಾಗಿ ರೂಪಿಸಿಕೊಳ್ಳಲು ತೊಡಗುತ್ತಾನೆ;

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೧೨.

ಪಡುವಣದಿ ಮುಳುಗುತಿಹ ರವಿಯೊಮ್ಮೆ ಕೇಳಿದನು
**“ಯಾರಿಹರು ನನ್ನ ಕೆಲಸ ನಿರ್ವಹಿಸಲು?”**
ಕ್ಷೀಣದನಿಯಲಿ ಹೇಳಿತೊಂದು ಮಣ್ಣಿನಾ ಹಣತೆ
**“ನಾನಿಹೆನು ಎಷ್ಟು ಶಕ್ಯವೊ ಬೆಳಗುತಿರಲು”**

**“ನನ್ನಿಂದಲೇ ಎಲ್ಲರಿಗೂ ಒಳ್ಳೆಯದಾಗುತ್ತಿದೆ. ನನ್ನನ್ನು ಬಿಟ್ಟರೆ ಇತರರು ಈ ಕೆಲಸವನ್ನು ಮಾಡಲಾರರು” ಎಂಬ ನಾನತ್ವದಿಂದ ಕೂಡಿರುವ ವ್ಯಕ್ತಿಗೆ ಅರಿವನ್ನು ಮೂಡಿಸುವ ಸಂಗತಿಯನ್ನು ಈ ಕವನದಲ್ಲಿ ರೂಪಕವೊಂದರ ಮೂಲಕ ಚಿತ್ರಿಸಲಾಗಿದೆ.**

**‘ನಾನತ್ವ’** ಎಂದರೆ ‘ನನ್ನ ದುಡಿಮೆಯಿಂದಲೇ ಈ ಕುಟುಂಬ ಉಳಿದಿದೆ / ನನ್ನ ಬುದ್ಧಿವಂತಿಕೆಯಿಂದಲೇ ಈ ಸಂಸ್ಥೆ ಬೆಳೆಯುತ್ತಿದೆ/ ನನ್ನ ಮುನ್ನೋಟದಿಂದಲೇ ಈ ನಾಡು ಪ್ರಗತಿಯನ್ನು ಹೊಂದುತ್ತಿದೆ’ ಎಂಬ ಅಹಂಕಾರದ ನಡೆನುಡಿ;

ಪಡುವಣ=ಪಶ್ಚಿಮ ದಿಕ್ಕು; ಮುಳುಗುತ+ಇಹ; ಮುಳುಗು=ಒಳಸೇರು/ ಕಾಣೆಯಾಗು/ಮರೆಯಾಗು; ಇಹ=ಇರುವ; ರವಿ+ಒಮ್ಮೆ; ರವಿ=ಸೂರ್ಯ/ ನೇಸರು; ಒಮ್ಮೆ=ಒಂದು ದಿನ ಸಂಜೆ; ಯಾರು+ಇಹರು; ಇಹರು=ಇರುವರು; ನಿರ್ವಹಿಸು=ಮಾಡು/ಜವಾಬ್ದಾರಿಯನ್ನು ಹೊರು;

**ಪಡುವಣದಿ ಮುಳುಗುತಿಹ ರವಿಯೊಮ್ಮೆ ಕೇಳಿದನು... “ಯಾರಿಹರು ನನ್ನ ಕೆಲಸ ನಿರ್ವಹಿಸಲು?”** =ಪಶ್ಚಿಮ ದಿಕ್ಕಿನ ಅಂಚಿನಲ್ಲಿ ಮರೆಯಾಗುತ್ತಿರುವ ರವಿಯು ಒಂದು ದಿನ ಸಂಜೆ “ಕತ್ತಲೆಯನ್ನು ಹೋಗಲಾಡಿಸಿ ಬೆಳಕನ್ನು ಕೊಡುವ ಶಕ್ತಿಯು ಜಗತ್ತಿನಲ್ಲಿ ನನ್ನೊಬ್ಬನ್ನು ಬಿಟ್ಟರೆ ಮತ್ತಾರಿಗೂ ಇಲ್ಲ” ಎಂಬ ಅಹಂಕಾರದಿಂದ “ಯಾರಿದ್ದಾರೆ ನನ್ನ ಈ ಕೆಲಸವನ್ನು ಮಾಡಲು” ಎಂದು ಜಗತ್ತಿನ ಮುಂದೆ ಒಂದು ಪ್ರಶ್ನೆಯನ್ನು ಒಗೆದ;

ಕ್ಷೀಣ=ಕುಗ್ಗಿದ/ಮೆಲ್ಲನೆಯ; ದನಿ=ಶಬ್ದ/ಸದ್ದು; ಹೇಳಿತು+ಒಂದು; ಹಣತೆ= ದೀಪ/ಸೊಡರು; ನಾನ್+ಇಹೆನು; ಇಹೆನು=ಇರುವೆನು; ಎಷ್ಟು=ಯಾವ ಪ್ರಮಾಣದಲ್ಲಿ; ಶಕ್ಯ=ಮಾಡಬಹುದಾದುದು/ಸಾಧ್ಯವಾದುದು; ಬೆಳಗುತ+ ಇರಲು; ಬೆಳಗುತ=ಬೆಳಕಿನ ಕಿರಣಗಳನ್ನು ಚೆಲ್ಲುತ್ತ; ಬೆಳಗುತಿರಲು=ಕತ್ತಲೆಯನ್ನು

ಹೋಗಲಾಡಿಸಿ ಬೆಳಕನ್ನು ಹರಡುತ್ತಿರಲು;

**ಕ್ಷೀಣದನಿಯಲಿ ಹೇಳಿತೊಂದು ಮಣ್ಣಿನಾ ಹಣತೆ... "ನಾನಿಹೆನು ಎಷ್ಟು ಶಕ್ಯವೊ ಬೆಳಗುತಿರಲು"**=ರವಿಯ ಅಹಂಕಾರದ ಪ್ರಶ್ನೆಗೆ ಒಂದು ಮಣ್ಣಿನ ಹಣತೆಯು ಮೆಲ್ಲನೆಯ ದನಿಯಲ್ಲಿ ನಾನಿದ್ದೇನೆ. ನನ್ನಿಂದ ಎಷ್ಟು ಸಾಧ್ಯವೋ ಅಷ್ಟರಮಟ್ಟಿಗೆ ನಾನಿರುವ ಎಡೆಯಲ್ಲಿ ಕವಿದಿರುವ ಕತ್ತಲೆಯನ್ನು ನಿವಾರಿಸಲು ಬೆಳಕಿನ ಕಿರಣಗಳನ್ನು ಹರಡುತ್ತೇನೆ" ಎಂದು ವಿನಯದಿಂದ ನುಡಿಯಿತು;

ಈ ಕವನದಲ್ಲಿ ರವಿ ಮತ್ತು ಹಣತೆಯ ಮಾತಿನ ರೂಪಕದ ಮೂಲಕ ಜಗತ್ತಿನ ನಿತ್ಯದ ಬದುಕಿನಲ್ಲಿ ಒಬ್ಬ ದೊಡ್ಡವನು; ಮತ್ತೊಬ್ಬ ಚಿಕ್ಕವನು ಎನ್ನುವುದು ಇಲ್ಲ. ತಮ್ಮ ತಮ್ಮ ನೆಲೆಗಳಲ್ಲಿ ಪ್ರತಿಯೊಬ್ಬರು ಮಾಡುತ್ತಿರುವ ಒಳಿತಿನ ಕೆಲಸಗಳೆಲ್ಲವೂ ಬೇರೆ ಬೇರೆ ಪ್ರಮಾಣದಲ್ಲಿ ಜಗತ್ತಿನ ಜೀವನವನ್ನು ಮುನ್ನಡೆಸುತ್ತಿವೆ ಎಂಬ ವಾಸ್ತವವನ್ನು ನಿರೂಪಿಸುತ್ತ, ಯಾವೊಬ್ಬ ವ್ಯಕ್ತಿಯು ತನ್ನಿಂದಲೇ ಜಗತ್ತು ನಡೆಯುತ್ತಿದೆ ಎಂಬ ಅಹಂಕಾರಕ್ಕೆ ಒಳಗಾಗಬಾರದೆಂಬ ತಿಳುವಳಿಕೆಯನ್ನು ನೀಡಲಾಗಿದೆ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೧೩

ನಮ್ಮ ಸುಖಭೋಗಕ್ಕೆ ಹೊಸ ಹೊಸತು ವಸ್ತುಗಳ
ಸಂಚಯನದಲ್ಲಿ ನಾವು ಮಗ್ನರಾಗಿಹೆವು
ಅಂತರಂಗದ ಪೂರ್ಣತೆಯ ದಿಟದಿ ಸುಖವಹುದು
ಎಂಬ ಸತ್ಯವ ನಾವು ಕಡೆಗಣಿಸುತಿಹೆವು.

**ಬಹಿರಂಗದ ಮಾರುಕಟ್ಟೆಯಲ್ಲಿ ಕಂಡುಬರುವ ಹೊಸ ಹೊಸ ವಸ್ತುಗಳನ್ನು ಕೊಂಡು ತಂದು ಮನೆಯನ್ನು ಅಂದಚೆಂದವಾಗಿ ಸಿಂಗರಿಸಿ ಆನಂದ ಪಡುವುದರಲ್ಲಿಯೇ ಮಗ್ನರಾಗಿರುವ ನಾವು, ಅಂತರಂಗದ ಜೀವನದಲ್ಲಿ ಸಹಮಾನವರೊಡನೆ ಪ್ರೀತಿ, ಕರುಣೆ, ತಾಳ್ಮೆ ಮತ್ತು ಗೆಳೆತನದಿಂದ ಒಂದುಗೂಡಿ ಬಾಳುವುದರಲ್ಲಿ ಆನಂದವಿದೆ ಎಂಬ ವಾಸ್ತವವನ್ನು ಕಡೆಗಣಿಸಿದ್ದೇವೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಸುಖ=ನಲಿವು/ನೆಮ್ಮದಿ/ಆನಂದ; ಭೋಗ=ಆನಂದವನ್ನು ಪಡೆಯುವುದು/ ಮಯ್ ಮನಸ್ಸನ್ನು ಉಲ್ಲಾಸಗೊಳಿಸುವಂತಹ ವಸ್ತುಗಳನ್ನು ಹೊಂದುವುದು;

ನಮ್ಮ ಸುಖಭೋಗಕ್ಕೆ=ನಮ್ಮ ಮಯ್ ಮನದ ಬಯಕೆಗಳನ್ನು ಈಡೇರಿಸಿಕೊಂಡು ಆನಂದವನ್ನು ಪಡುವುದಕ್ಕಾಗಿ;

ಹೊಸತು=ನೂತನವಾದುದು/ನವೀನವಾದುದು;

ಹೊಸ ಹೊಸತು ವಸ್ತುಗಳು=ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಯಿಂದಾಗಿ ಪ್ರತಿನಿತ್ಯವೂ ಮಾರುಕಟ್ಟೆಯಲ್ಲಿ ದೊರೆಯುತ್ತಿರುವ ನೂರೆಂಟು ಬಗೆಯ ವಸ್ತುಗಳು;

ಸಂಚಯನ=ಒಟ್ಟುಗೂಡಿಸುವುದು/ಸಂಗ್ರಹಿಸುವುದು/ಕಲೆಹಾಕುವುದು;

ಮಗ್ನರ್+ಆಗಿ+ಇಹೆವು; ಮಗ್ನ=ತಲ್ಲೀನನಾದವನು; ಇಹೆವು=ಇರುವೆವು;

**ಹೊಸ ಹೊಸತು ವಸ್ತುಗಳ ಸಂಚಯನದಲ್ಲಿ ನಾವು ಮಗ್ನರಾಗಿಹೆವು**=ಹೊಸ ಹೊಸ ವಸ್ತುಗಳನ್ನು ಕೊಂಡು ತಂದು ಕಲೆಹಾಕುವುದರಲ್ಲಿಯೇ ತೊಡಗಿದ್ದೇವೆ. ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ನಮ್ಮ ಕಣ್ಣುಗಳಿಗೆ ಮತ್ತು ಮನಸ್ಸಿಗೆ ಆನಂದವನ್ನು ಕೊಡುವ ಬಗೆಬಗೆಯ ವಸ್ತುಗಳನ್ನು ಪಡೆಯುವುದು

ನಮ್ಮ ಬದುಕಿಗೆ ತುಂಬಾ ಅಗತ್ಯವಾಗಿ ಮತ್ತು ದೊಡ್ಡದಾಗಿ ಕಾಣಿಸುತ್ತಿವೆಯೇ ಹೊರತು, ನಮ್ಮ ಕಣ್ಣ ಮುಂದಿರುವ ವ್ಯಕ್ತಿಗಳ ಜೊತೆಯಲ್ಲಿ ಒಲವು ನಲಿವು ನೆಮ್ಮದಿಯಿಂದ ಬಾಳುವಂತಹ ನಂಟನ್ನು ಹೊಂದಿರಬೇಕೆಂಬುದು ತುಂಬಾ ಅಗತ್ಯವಾಗಿ ಮತ್ತು ದೊಡ್ಡದಾಗಿ ಕಾಣಿಸುತ್ತಿಲ್ಲ;

ಅಂತರಂಗ=ಮನಸ್ಸು; ಪೂರ್ಣತೆ=ಎಲ್ಲವನ್ನೂ ಒಳಗೊಂಡಿರುವುದು/ಸಮಸ್ತ;

**ಅಂತರಂಗದ ಪೂರ್ಣತೆ**=ಇದೊಂದು ನುಡಿಗಟ್ಟಾಗಿ ಬಳಕೆಗೊಂಡಿದೆ. ವ್ಯಕ್ತಿಯು ತನ್ನ ಕುಟುಂಬದ ನೆಲೆಯಲ್ಲಿ, ದುಡಿಮೆಯ ನೆಲೆಯಲ್ಲಿ ಮತ್ತು ಸಾರ್ವಜನಿಕ ನೆಲೆಯಲ್ಲಿ ತನ್ನೊಡನೆ ವ್ಯವಹರಿಸುವ ವ್ಯಕ್ತಿಗಳ ಜತೆಯಲ್ಲಿ ಮಾನಸಿಕವಾಗಿ ಒಳ್ಳೆಯ ನಂಟನ್ನು ಹೊಂದಿರಬೇಕು. ಇತರರನ್ನು ಯಾವುದೇ ಕಾರಣಕ್ಕಾಗಿ ಕೀಳಾಗಿ ಕಾಣದೆ, ಒಳ್ಳೆಯ ಮನಸ್ಸಿನಿಂದ ಪ್ರಯತ್ನಪೂರ್ವಕವಾಗಿ ಎಲ್ಲರೊಡನೆ ಹೊಂದಿಕೊಂಡು ಬಾಳುವುದರಿಂದ ಆನಂದ ದೊರೆಯುತ್ತದೆ ಎಂಬುದನ್ನು ಅರಿತಿರಬೇಕು; ಪರಸ್ಪರ ಹೊಂದಿಕೊಂಡು ಬಾಳುವ ಗುಣ ಪ್ರತಿಯೊಬ್ಬರಲ್ಲಿಯೂ ಇದ್ದಾಗ ಮಾತ್ರ ಜೀವನದಲ್ಲಿ ನೆಮ್ಮದಿಯು ದೊರೆಯುತ್ತದೆ;

ದಿಟ=ನಿಜ/ವಾಸ್ತವ; ಸುಖ+ಅಹುದು; ಸತ್ಯ=ವಾಸ್ತವ/ನಿಜ; ಕಡೆಗಣಿಸುತ+ ಇಹೆವು; ಕಡೆಗಣಿಸು=ತಿರಸ್ಕರಿಸು/ಉದಾಸೀನ ಮಾಡು/ಗಮನ ಕೊಡದಿರು;

**ಅಂತರಂಗದ ಪೂರ್ಣತೆಯೆ ದಿಟದಿ ಸುಖವಹುದು ಎಂಬ ಸತ್ಯವ ನಾವು ಕಡೆಗಣಿಸುತಿಹೆವು**=ಇತರರೊಡನೆ ಒಳ್ಳೆಯ ನಡೆನುಡಿಯಿಂದ ಕೂಡಿಬಾಳಿದಾಗ ಮಾತ್ರ ನಾವು ಜೀವನದಲ್ಲಿ ಆನಂದವನ್ನು ಪಡೆಯಬಲ್ಲೆವು ಎಂಬ ವಾಸ್ತವವನ್ನು ಕಡೆಗಣಿಸಿದ್ದೇವೆ.

ಬಹಿರಂಗದ ಜೀವನದಲ್ಲಿ ಅನುಕೂಲವನ್ನು ಒದಗಿಸಿಕೊಡುವಂತಹ ಸಲಕರಣೆಗಳು ಹೆಚ್ಚು ಹೆಚ್ಚು ಬಳಕೆಗೆ ಬಂದಂತೆಲ್ಲಾ, ವ್ಯಕ್ತಿಗಳ ಅಂತರಂಗದ ಬದುಕಿನ ನೆಮ್ಮದಿಯ ಪ್ರಮಾಣ ಕುಗ್ಗುತ್ತಿರುವ ವಾಸ್ತವವನ್ನು ಈ ಕವನದಲ್ಲಿ ಹೇಳಲಾಗಿದೆ.

"ಹಣವೊಂದಿದ್ದರೆ ಎಲ್ಲವನ್ನು ಪಡೆಯಬಲ್ಲೆವು" ಎಂಬ ಕಾಲಮಾನದಲ್ಲಿ ಒಬ್ಬರು ಮತ್ತೊಬ್ಬರನ್ನು ಅವಲಂಬಿಸುವ ಅಗತ್ಯ ಇಲ್ಲವಾಗುತ್ತಿದೆ. ವಿಜ್ಞಾನ ಮತ್ತು ತಂತ್ರಜ್ಞಾನದಿಂದ ರೂಪುಗೊಂಡ ನಾಗರಿಕತೆಯಲ್ಲಿ ಮಾನವನು ವಸ್ತುಗಳ ಒಡನಾಡಿಯಾಗಿ, ಸಹಮಾನವರಿಂದ ದೂರ ದೂರ ಸರಿಯುತ್ತ, ಪರಸ್ಪರ ಒಲವು ನಲಿವು ನೆಮ್ಮದಿಯ ಬದುಕನ್ನು ಕಡೆಗಣಿಸಿದ್ದಾನೆ ಎಂಬ ವಾಸ್ತವವನ್ನು ಈ ಕವನದಲ್ಲಿ ಚಿತ್ರಿಸಲಾಗಿದೆ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

# ೧೪

ಜಗಕೆ ಸತತವು ಒಳಿತು ಮಾಡುವೆ ಎನುತ
ದಬ್ಬಾಳಿಕೆಯಲಿ ಆಳುತಿಹ ದೊರೆಯಿಂದ
ಕ್ಷೋಭೆಯು ಹೆಚ್ಚುವುದು ಈ ಜಗದಲಿ.

**"ಪ್ರಜೆಗಳಿಗೆ ಒಳಿತನ್ನು ಮಾಡುತ್ತೇನೆ" ಎಂದು ಮಾತಿನಲ್ಲಿ ಹೇಳುತ್ತ, ಕ್ರಿಯೆಯಲ್ಲಿ ದಬ್ಬಾಳಿಕೆಯಿಂದ ಆಡಳಿತವನ್ನು ನಡೆಸುವ ದೊರೆಯಿಂದ ನಾಡಿಗೆ ಕೇಡಾಗುತ್ತದೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

**'ದಬ್ಬಾಳಿಕೆಯ ಆಡಳಿತ'** ಎಂದರೆ ದೊರೆಯ ಆಡಳಿತದ ರೀತಿನೀತಿಗಳನ್ನು ಯಾವೊಬ್ಬ ಪ್ರಜೆಯೂ ಪ್ರಶ್ನಿಸಬಾರದು; ದೊರೆಯ ಎದುರಾಗಿ ಸೊಲ್ಲೆತ್ತಿದವರನ್ನು ಕ್ರೂರವಾದ ರೀತಿಯಲ್ಲಿ ಸದೆಬಡಿಯಲಾಗುತ್ತದೆ; ದೊರೆಯು ಮಾಡುವ ಕಾನೂನು ಕಟ್ಟಲೆಗಳನ್ನು ಒಪ್ಪದಿರುವವರನ್ನು 'ದೇಶದ್ರೋಹಿ/ರಾಜದ್ರೋಹಿ' ಎಂದು ಹೆಸರಿಸಿ, ಅವರನ್ನು ಸೆರೆಮನೆಗೆ ತಳ್ಳಿ, ಚಿತ್ರಹಿಂಸೆಯನ್ನು ನೀಡಿ, ಜೀವಂತವಾಗಿ ನರಳಿಸುವುದು ಇಲ್ಲವೇ ಕೊಲ್ಲುವುದು; ದಬ್ಬಾಳಿಕೆಯ ಆಡಳಿತದಲ್ಲಿ ದೊರೆಯು ತನ್ನ ಗದ್ದುಗೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಯಾರನ್ನು ಬೇಕಾದರೂ ಬಲಿ ತೆಗೆದು ಕೊಳ್ಳಬಲ್ಲ ಇಲ್ಲವೇ ಯಾವುದನ್ನಾದರೂ ನಾಶ ಮಾಡಬಲ್ಲ ಕ್ರೂರಿಯಾಗಿರುತ್ತಾನೆ;

ಜಗ=ಲೋಕ/ಪ್ರಪಂಚ/ಜನಸಮುದಾಯ; ಸತತ=ಯಾವಾಗಲೂ/ನಿರಂತರ ವಾಗಿ/ಸದಾಕಾಲ; ಒಳಿತು=ಒಳ್ಳೆಯದನ್ನು; ಎನುತ=ಎಂದು ಹೇಳುತ್ತ;

**ಜಗಕೆ ಸತತವು ಒಳಿತು ಮಾಡುವೆ ಎನುತ**=ಜನರ ಬದುಕಿಗೆ ಅಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯವು ಎಲ್ಲರಿಗೂ ದೊರಕುವಂತಹ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದು, ಪ್ರಜೆಗಳೆಲ್ಲರೂ ಒಲವು ನಲಿವು ನೆಮ್ಮದಿಯಿಂದ ಬಾಳುವಂತೆ ಮಾಡುತ್ತೇನೆ ಎಂದು ಮಾತಿನಲ್ಲಿ ಜನರನ್ನು ಮರುಳುಮಾಡುತ್ತ;

ದಬ್ಬಾಳಿಕೆ=ಇತರರನ್ನು ಅಡಿಯಾಳುಗಳನ್ನಾಗಿ ಮಾಡಿಕೊಂಡು ಸುಲಿಗೆ ಮಾಡುವುದು/ಕಿರುಕುಳ ಕೊಡುವುದು/ಹಿಂಸಿಸುವುದು/ಕೊಲ್ಲುವುದು; ಆಳುತ+ ಇಹ; ಆಳು=ಆಡಳಿತವನ್ನು ನಡೆಸು; ಇಹ=ಇರುವ; ದೊರೆ+ಇಂದ; ದೊರೆ=

ರಾಜ/ಅರಸ; ಕ್ಷೋಭೆ=ಸಂಕಟ/ತಳಮಳ/ಗೊಂದಲ/ಕೇಡು/ಕಾಟ/ಪೀಡನೆ;

**ದಬ್ಬಾಳಿಕೆಯಲಿ ಆಳುತಿಹ ದೊರೆಯಿಂದ ಕ್ಷೋಭೆಯು ಹೆಚ್ಚುವುದು=** ದಬ್ಬಾಳಿಕೆಯಿಂದ ಆಡಳಿತವನ್ನು ನಡೆಸುತ್ತಿರುವ ದೊರೆಯ ರಾಜ್ಯದಲ್ಲಿ ಕೇಡಿಗಳು, ವಂಚಕರು ಮತ್ತು ಕ್ರೂರಿಗಳಾದ ಜನರು ದೊರೆಗೆ ಆಪ್ತರಾಗುತ್ತಾರೆ. ಇದರಿಂದಾಗಿ ನಾಡಿನಲ್ಲಿ ಆಚರಣೆಯಲ್ಲಿದ್ದ ನ್ಯಾಯಯುತವಾದ ಕಾನೂನು ಕಟ್ಟಲೆಗಳು ಕುಸಿಯುತ್ತವೆ. ಕ್ರೂರಿಯಾದ ದೊರೆಯ ಎಡಬಲದಲ್ಲಿರುವ ಮೇಲು ಜಾತಿಯ ಮತ್ತು ಮೇಲುವರ್ಗದ ಜನರು ನೂರೆಂಟು ಬಗೆಯ ಜಾತಿ ಮತ್ತು ಹಲವಾರು ಮತಗಳಿಂದ ರಚನೆಗೊಂಡಿರುವ ಸಮಾಜದ ಜನರ ಮನದಲ್ಲಿ ಪರಸ್ಪರ ಅಪನಂಬಿಕೆಯ ಮತ್ತು ಹಗೆತನದ ಒಳಮಿಡಿತಗಳನ್ನು ಮೂಡಿಸಿ, ಬೇರೆ ಬೇರೆ ಜಾತಿ ಮತಗಳಿಗೆ ಸೇರಿದ ಜನರು ಪರಸ್ಪರ ಹೊಡೆದಾಡಿಕೊಳ್ಳುವಂತೆ ಮಾಡುತ್ತಾರೆ.

ಜಾತಿಮತದ ಬಲವುಳ್ಳ, ತೋಳ್ ಬಲವುಳ್ಳ, ಹಣಬಲವುಳ್ಳ ವ್ಯಕ್ತಿಗಳು ದುಡಿಯುವ ವರ್ಗದ ಬಡಜನರನ್ನು ಮತ್ತು ಯಾವುದೇ ಬಲವಿಲ್ಲದ ಜನಸಮುದಾಯವನ್ನು ಸಾವುನೋವಿಗೆ ಗುರಿಮಾಡುತ್ತಾರೆ.

ದೊರೆಯ ಕ್ರೂರತನ ಮತ್ತು ವಂಚಕತನದಿಂದ ಕೂಡಿದ ದಬ್ಬಾಳಿಕೆಯ ಆಡಳಿತದಲ್ಲಿ ನಾಡಿನ ಸಂಪತ್ತು ದೊಡ್ಡ ಪ್ರಮಾಣದಲ್ಲಿ ಮೇಲುಜಾತಿಯವರ ಮತ್ತು ಮೇಲುವರ್ಗದ ಜನರ ಪಾಲಾಗುತ್ತದೆ. ಬಡವರ ಬಡತನ ಹೆಚ್ಚಾಗುತ್ತದೆ; ಸಿರಿವಂತರ ಸಂಪತ್ತು ಇಮ್ಮಡಿಗೊಳ್ಳುತ್ತದೆ. ಬಡವರು ಮತ್ತು ಬಲ್ಲಿದರ ನಡುವಣ ಅಂತರ ದಿನೇ ದಿನೇ ಹೆಚ್ಚಾಗುತ್ತದೆ.

ಇಂತಹ ಅಸಮಾನತೆಯಿಂದಾಗಿ ಕೆಳಜಾತಿ ಮತ್ತು ಕೆಳವರ್ಗಕ್ಕೆ ಸೇರಿದ ದುಡಿಯುವ ವರ್ಗದ ಬಡಜನತೆಯು ಹೆಚ್ಚಿನ ವಿದ್ಯೆಯನ್ನು ಪಡೆಯಲಾಗದೆ, ಉನ್ನತವಾದ ಹುದ್ದೆಗಳನ್ನು ಏರಲಾರದೆ, ದಿನನಿತ್ಯದ ಹಸಿವನ್ನು ನೀಗಿಸಿಕೊಳ್ಳುವು ದರಲ್ಲಿಯೇ ಮಗ್ನರಾಗುತ್ತಾರೆ.

ದಬ್ಬಾಳಿಕೆಯ ದೊರೆಯ ಆಡಳಿತದಲ್ಲಿ ಬಹಿರಂಗದಲ್ಲಿ ನಾಡು ಸಿರಿವಂತಿಕೆಯಿಂದ ಕೂಡಿರುವಂತೆ ಕಂಡುಬಂದರೂ, ಅಂತರಂಗದಲ್ಲಿ ಕೋಟಿಗಟ್ಟಲೆ ಜನರು ಜೀವನದ ಉದ್ದಕ್ಕೂ ಬಡತನ ಮತ್ತು ಅಪಮಾನದಲ್ಲಿಯೇ ನರಳುತ್ತ, ಒಂದಲ್ಲ ಒಂದು ಬಗೆಯ ಹೆದರಿಕೆ, ಆತಂಕ ಹಾಗೂ ಸಂಕಟದಿಂದ ಪರಿತಪಿಸುತ್ತಿರುತ್ತಾರೆ.

ಕನ್ನಡ ಅನುವಾದ : **ಜಿ. ರಾಮನಾಥ ಭಟ್**

## ೧೫. ಮುಕ್ತ ನಾಕದೆಡೆಗೆ

ಎಲ್ಲಿ ಮನಕೆ ಭೀತಿ ಇಲ್ಲವೊ
ಎಲ್ಲಿ ಶಿರವೆತ್ತಿ ನಿಲಬಹುದೊ
ಎಲ್ಲಿ ತಿಳಿವಿಗಂಕುಶವಿಲ್ಲವೊ

ಎಲ್ಲಿ ಲೋಕವು ಚೂರಾಗಿ ಚದುರಿ
ಅನುದಾರದ ಸ್ವಪ್ರೀತಿಯ
ಅಡ್ಡಗೋಡೆಗಳಾಗಿ ಸಿಡಿದಿಲ್ಲವೊ

ಎಲ್ಲಿ ಮನದಾಳದ ಮಾತುಗಳು
ಸತ್ಯದಂತರಾಳದಿಂದೀಚೆ ಬರುವುವೊ

ಎಲ್ಲಿ ದಣಿವಿರದವಿರತ ದುಡಿಮೆ
ತನ್ನ ಬಾಹುಗಳನಖಂಡತೆಯೆಡೆಗೆ ಚಾಚಿದೆಯೊ

ಎಲ್ಲಿ ತರ್ಕದ ನಿರ್ಮಲ ತೊರೆಯು
ಸತ್ತ ಕಂದಾಚಾರಗಳ ಹಾಳು
ಮರಳುಗಾಡಿನುಸುಕಿನಲಿ
ತನ್ನ ದಾರಿ ತಪ್ಪಿಲ್ಲವೊ

ಎಲ್ಲಿ ಕರ್ಮವು ವಿಚಾರದೊಡಗೂಡಿ
ಪ್ರಜ್ಞೆಯನು ಸತತವೂ
ವಿಸ್ತರಿಸಲುಪಕ್ರಮಿಸುವಂತೆ
ನೀ ಮುನ್ನಡೆಸುತಿಹೆಯೊ

ನನ್ನ ತಂದೆ ಅಂಥ ಮುಕ್ತ
ನಾಕದೊಳಗೆನ್ನ ನಾಡೆಚ್ಚರಗೊಳ್ಳಲಿ.

**ನಾಡಿನಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯು ಸರ್ವಸ್ವತಂತ್ರನಾಗಿ ಸಹಮಾನವರ ಜತೆಗೂಡಿ ಒಲವು ನಲಿವು ನೆಮ್ಮದಿಯಿಂದ ಬಾಳುವಂತಹ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಹೊಂದುವಂತಾಗಲಿ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

**'ಸಾಮಾಜಿಕ ಅರಿವು'** ಎಂದರೆ 'ಲೋಕಜೀವನದಲ್ಲಿ ಯಾವುದು ಸರಿ/ಯಾವುದು ತಪ್ಪು; ಯಾವುದು ನೀತಿ/ಯಾವುದು ಅನೀತಿ; ಯಾವುದು ವಾಸ್ತವ/ಯಾವುದು ಕಲ್ಪಿತ' ಎಂಬುದನ್ನು ಒರೆಹಚ್ಚಿ ನೋಡಿ, ತನ್ನನ್ನು ಒಳಗೊಂಡಂತೆ ಜನಸಮುದಾಯಕ್ಕೆ ಒಳಿತನ್ನು ಮಾಡುವ ನುಡಿ ಮತ್ತು ದುಡಿಮೆಯ ಸ್ವರೂಪವನ್ನು ತಿಳಿಯುವುದು;

**'ಸಾಮಾಜಿಕ ಎಚ್ಚರ'** ಎಂದರೆ ಜಾತಿ, ಮತ, ದೇವರ ಹೆಸರಿನಲ್ಲಿ ನಡೆಯುತ್ತಿರುವ ಆಚರಣೆಗಳಿಂದ ಮಾನವರ ಬದುಕಿನಲ್ಲಿ ಉಂಟಾಗುತ್ತಿರುವ ಪರಿಣಾಮಗಳನ್ನು ಸರಿಯಾಗಿ ಗಮನಿಸಿ, ಯಾವ ಬಗೆಯ ಆಚರಣೆಗಳು ಮಾನವ ಸಮುದಾಯದ ಸಂಕಟಗಳಿಗೆ ಕಾರಣವಾಗಿವೆ ಎಂಬುದನ್ನು ಅರಿತು ಕೊಂಡು, ಅಂತಹ ಆಚರಣೆಗಳಿಂದ ದೂರವಿರುವುದು;

ಮುಕ್ತ=ಬಿಡುಗಡೆ ಹೊಂದಿದ/ತೆರೆದ;

**ನಾಕದ+ಎಡೆಗೆ; ನಾಕ**=ಸ್ವರ್ಗ/ಈ ಪ್ರಪಂಚದಲ್ಲಿ ಒಳ್ಳೆಯ ನಡೆನುಡಿಯಿಂದ ಬಾಳಿದವರು ಸತ್ತ ನಂತರ ಹೋಗಿ ನೆಲೆಸುವ ಒಂದು ನೆಲೆ ಎಂಬ ನಂಬಿಕೆಯು ಜನಮನದಲ್ಲಿದೆ/ಒಲವು ನಲಿವು ನೆಮ್ಮದಿಯ ತಾಣ ಎಂಬ ರೂಪಕದ ತಿರುಳಿನಲ್ಲಿ **'ನಾಕ'** ಎಂಬ ಪದ ಬಳಕೆಯಾಗಿದೆ; ಎಡೆ=ಜಾಗ/ನೆಲೆ; ಎಡೆಗೆ=ನೆಲೆಯ ಕಡೆಗೆ/ನೆಲೆಯತ್ತ;

**ಮುಕ್ತ ನಾಕದೆಡೆ**=ಯಾವುದೇ ಬಗೆಯ ಅಡೆತಡೆಗಳಾಗಲಿ ಇಲ್ಲವೇ ಅಂಕೆಶಂಕೆ ಗಳಾಗಲಿ ಇಲ್ಲದೆ ಎಲ್ಲ ರೀತಿಯಿಂದಲೂ ಆನಂದಮಯವಾಗಿರುವ ನೆಲೆ;

ಎಲ್ಲಿ=ಯಾವ ಜಾಗದಲ್ಲಿ/ಯಾವ ನೆಲೆಯಲ್ಲಿ; ಮನ=ಮನಸ್ಸು; ಭೀತಿ=ಹೆದರಿಕೆ/ಅಂಜಿಕೆ;

**ಎಲ್ಲಿ ಮನಕೆ ಭೀತಿ ಇಲ್ಲವೊ**=ಯಾವ ನೆಲೆಯಲ್ಲಿ ಮನಸ್ಸಿಗೆ ಹೆದರಿಕೆಯೆಂಬುದು ಇರುವುದಿಲ್ಲವೊ;

ಶಿರ+ಎತ್ತಿ; ಶಿರ=ತಲೆ; ಶಿರವೆತ್ತಿ ನಿಲ್ಲುವುದು=ಇದೊಂದು ನುಡಿಗಟ್ಟು. ಯಾರಿಗೂ ಅಡಿಯಾಳಾಗದೆ ಸರ್ವಸ್ವತಂತ್ರನಾಗಿ ಬಾಳುವುದು;

**ಎಲ್ಲಿ ಶಿರವೆತ್ತಿ ನಿಲಬಹುದೊ**=ಯಾವ ನೆಲೆಯಲ್ಲಿ ಯಾರಿಗೂ ಇಲ್ಲವೇ ಯಾವ ಶಕ್ತಿಗೂ ಅಡಿಯಾಳಾಗದೆ ಸ್ವತಂತ್ರವಾಗಿ ಬಾಳಬಹುದೊ;

ತಿಳಿವಿಗೆ+ಅಂಕುಶ+ಇಲ್ಲವೊ; ತಿಳಿವು=ಅರಿವು/ತಿಳುವಳಿಕೆ;

ಅಂಕುಶ=ಲೋಹದಿಂದ ಮಾಡಿದ ಮೊನಚಾದ ಹತಾರ. ಆನೆಯನ್ನು ಪಳಗಿಸಲು ಮತ್ತು ಹತೋಟಿಯಲ್ಲಿಟ್ಟುಕೊಳ್ಳಲು ಈ ಹತಾರವನ್ನು ಬಳಸುತ್ತಾರೆ;

**ಎಲ್ಲಿ ತಿಳಿವಿಗಂಕುಶವಿಲ್ಲವೊ**=ಯಾವ ನೆಲೆಯಲ್ಲಿ ತಿಳುವಳಿಕೆಯನ್ನು ಪಡೆಯುವುದಕ್ಕೆ ಮತ್ತು ಪಡೆದ ತಿಳುವಳಿಕೆಯನ್ನು ಕಾರ್ಯರೂಪಕ್ಕೆ ತರುವುದಕ್ಕೆ ಯಾವುದೇ ಬಗೆಯ ಅಡೆತಡೆಗಳು ಇರುವುದಿಲ್ಲವೋ ;

ಲೋಕ=ಜಗತ್ತು/ಪ್ರಪಂಚ; ಚೂರು+ಆಗಿ; ಚೂರು=ಹೋಳು/ತುಂಡು; ಚದುರಿ=ಚೆಲ್ಲಾಪಿಲ್ಲಿಯಾಗಿ;

**ಲೋಕವು ಚೂರಾಗಿ ಚದುರಿ**=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೊಂಡಿವೆ. ಲೋಕವು ಒಡೆದು ಚೂರು ಚೂರಾಗಿ ಹರಡಿಕೊಂಡಿದೆ ಎಂದರೆ ಲೋಕದಲ್ಲಿರುವ ಮಾನವ ಸಮುದಾಯವು ಕಪ್ಪು–ಬಿಳುಪಿನ ಮಯ್ ಬಣ್ಣದಿಂದಾಗಿ ಕರಿಯರು–ಬಿಳಿಯರು; ಮಾನವರೇ ಕಟ್ಟಿಕೊಂಡಿರುವ ಮತಗಳಿಂದಾಗಿ ಹಿಂದೂ–ಮುಸ್ಲಿಮ್–ಕ್ರೈಸ್ತ–ಸಿಖ್–ಪಾರ್ಸಿ ಮತ್ತು ಇನ್ನಿತರ ಮತದವರು; ಈ ಮತಗಳ ಒಳಗೆ ಮತ್ತೆ ಹಲವಾರು ಬಗೆಯ ಜಾತಿ ಉಪಜಾತಿಯವರು; ಲಿಂಗದ ಕಾರಣದಿಂದಾಗಿ ಗಂಡಸರು–ಹೆಂಗಸರು; ಪ್ರಾಂತ್ಯಗಳ ಗಡಿಗಳಿಂದಾಗಿ ಬೇರೆ ಬೇರೆ ದೇಶದವರು/ರಾಜ್ಯದವರು ಎಂಬ ಹಲವು ಬಗೆಗಳಲ್ಲಿ ವಿಂಗಡಣೆಗೊಂಡಿದೆ;

ಉದಾರ=ತ್ಯಾಗಶೀಲತೆಯ/ಪ್ರಾಮಾಣಿಕತನ/ನ್ಯಾಯಸಮ್ಮತವಾದ ನಡೆನುಡಿ;

ಅನುದಾರ=ತ್ಯಾಗಶೀಲತೆಯಿಲ್ಲದ/ಪ್ರಾಮಾಣಿಕತನವಿಲ್ಲದ/ನ್ಯಾಯಸಮ್ಮತವಲ್ಲದ ನಡೆನುಡಿ; ಸ್ವಪ್ರೀತಿ=ತನ್ನನ್ನು ತಾನೇ ಮೋಹಿಸುವುದು/ತನ್ನ ಹಿತಕ್ಕಾಗಿಯೇ ಬಾಳುವುದು; ಸಿಡಿದು+ಇಲ್ಲವೊ; ಸಿಡಿ=ಒಡೆ/ಸೀಳು/ದೂರವಾಗು;

**ಅನುದಾರದ ಸ್ವಪ್ರೀತಿಯ ಅಡ್ಡಗೋಡೆಗಳು**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಯಾಗಿವೆ. ಜಾತಿ, ಮತ, ಜನಾಂಗ, ಪ್ರಾಂತ್ಯಗಳ ವಿಂಗಡಣೆಯಿಂದಾಗಿ ಮಾನಸಿಕವಾಗಿ ದೂರದೂರವಾಗಿರುವ ಜನರ ವರ್ತನೆಯಲ್ಲಿ **"ನಾವು ಇತರರಿಗಿಂತ ದೊಡ್ಡವರು/ಉತ್ತಮರು"** ಎಂಬ ಅಹಂಕಾರ, ನಾಡಿನ ಸಂಪತ್ತು ಮತ್ತು ಆಡಳಿತದ ಗದ್ದುಗೆಯು ನಮ್ಮ ಜಾತಿಮತದವರಿಗೆ ದೊರಕಬೇಕೆಂಬ ಕೆಟ್ಟ ಉದ್ದೇಶ ಹಾಗೂ ಇತರ ಪಂಗಡದವರನ್ನು ತಿರಸ್ಕಾರದಿಂದ ಕಾಣುವ ಕೆಟ್ಟ ನಡೆನುಡಿಯು ನೆಲೆಗೊಂಡಿದೆ. ಇಂತಹ ಕೆಟ್ಟ ನಡೆನುಡಿಯ ಕಾರಣದಿಂದ ಮಾನವ ಸಮುದಾಯಗಳ ನಡುವೆ ಮಾನಸಿಕವಾಗಿ ಅಡ್ಡಗೋಡೆಗಳು ನಿರ್ಮಾಣಗೊಂಡು, ಜನಸಮುದಾಯಗಳನ್ನು ಬೇರ್ಪಡಿಸಿವೆ.

**ಎಲ್ಲಿ ಲೋಕವು ಚೂರಾಗಿ ಚದುರಿ ಅನುದಾರದ ಸ್ವಪ್ರೀತಿಯ ಅಡ್ಡಗೋಡೆಗಳಾಗಿ ಸಿಡಿದಿಲ್ಲವೊ**=ಯಾವ ನೆಲೆಯಲ್ಲಿ ಜಾತಿಮತದ ಕಾರಣದಿಂದ ಜನಸಮುದಾಯದ ಮನಸ್ಸು ಒಡೆದು ಬೇರೆ ಬೇರೆಯಾಗಿಲ್ಲವೋ;

ಮನದ+ಆಳದ; ಮನದಾಳದ ಮಾತು=ಮನಸ್ಸಿನಲ್ಲಿ ತುಡಿಯುವ ನಾನಾ ಬಗೆಯ ಚಿಂತನೆಗಳು; ಸತ್ಯದ+ಅಂತರಾಳ+ಇಂದ+ಈಚೆ; ಸತ್ಯ=ದಿಟ/ನಿಜ; ಅಂತರಾಳ=ಒಳಗಡೆ; ಅಂತರಾಳದಿಂದ=ಒಳಗಿನಿಂದ; ಈಚೆ=ಹೊರಕ್ಕೆ;

**ಎಲ್ಲಿ ಮನದಾಳದ ಮಾತುಗಳು ಸತ್ಯದಂತರಾಳದಿಂದೀಚೆ ಬರುವುವೊ**=ಯಾವ ನೆಲೆಯಲ್ಲಿ ಪರಸ್ಪರ ಪ್ರೀತಿ, ಕರುಣೆ, ತಾಳ್ಮೆ, ಸಮಾನತೆ ಮತ್ತು ಗೆಳೆತನದ ಮಾತುಗಳು ಅಂತರಂಗದ ಮನಸ್ಸಿನಿಂದ ಹೊರಹೊಮ್ಮುತ್ತವೆಯೊ ;

ದಣಿವು+ಇರದ+ಅವಿರತ; ದಣಿವು=ಆಯಾಸ/ಬಳಲಿಕೆ; ಅವಿರತ=ಬಿಡುವಿಲ್ಲದ; ದುಡಿಮೆ=ಕೆಲಸ; ಬಾಹು+ಗಳ್+ಅನ್+ಅಖಂಡತೆ+ಎಡೆಗೆ; ಬಾಹು=ತೋಳು; ಅನ್=ಅನ್ನು; ಅಖಂಡತೆ=ಎಲ್ಲವನ್ನು ಒಳಗೊಂಡು/ಇಡಿಯಾಗಿ; ಚಾಚು=ವಿಸ್ತರಿಸು/ಮುಂದೆ ಒಡ್ಡು;

**ಎಲ್ಲಿ ದಣಿವಿರದವಿರತ ದುಡಿಮೆ ತನ್ನ ಬಾಹುಗಳನಖಂಡತೆಯೆಡೆಗೆ ಚಾಚಿದೆಯೊ**=ಬಳಲಿಕೆಯನ್ನೇ ಕಾಣದೆ ಅತ್ಯಂತ ಉತ್ಸಾಹ ಉಲ್ಲಾಸದಿಂದ ನಿರಂತರವಾಗಿ ಮಾಡುತ್ತಿರುವ ದುಡಿಮೆಯು ಇಡೀ ಜನಸಮುದಾಯದ ಒಳಿತಿಗಾಗಿ ಯಾವ ನೆಲೆಗಳಲ್ಲಿ ಹಬ್ಬಿದೆಯೊ;

ತರ್ಕ=ವಿಚಾರ/ಚರ್ಚೆ/ವಾದ; ನಿರ್ಮಲ=ಶುಚಿಯಾದ; ತೊರೆ=ನದಿ/ಹೊಳೆ; **ತರ್ಕದ ನಿರ್ಮಲ ತೊರೆ**=ಈ ನುಡಿಗಳು ರೂಪಕವಾಗಿ ಬಳಕೆಗೊಂಡಿವೆ. ಒಳ್ಳೆಯ ಚಿಂತನೆಯಿಂದ ಹೊರಹೊಮ್ಮಿದ ವಿಚಾರಗಳು;

ಸತ್ತ=ಸಾವನ್ನಪ್ಪಿದ; ಕಂದಾಚಾರ=ಸಂಪ್ರದಾಯ/ಹಿಂದಿನಿಂದ ನಡೆದು ಬಂದ ಆಚರಣೆ/ಕಟ್ಟುಪಾಡು;

ಸತ್ತ ಕಂದಾಚಾರ=ಜಾತಿ ಮತ ದೇವರ ಹೆಸರಿನಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಪ್ರಯೋಜನವಿಲ್ಲದ ಆಚರಣೆಗಳು;

ಮರಳುಗಾಡಿನ+ಉಸುಕಿನಲಿ; ಉಸುಕು=ಮರಳಿನ ಕಣಗಳು;

**ಎಲ್ಲಿ ತರ್ಕದ ನಿರ್ಮಲ ತೊರೆಯು ಸತ್ತ ಕಂದಾಚಾರಗಳ ಹಾಳು ಮರಳು ಗಾಡಿನುಸುಕಿನಲಿ ತನ್ನ ದಾರಿ ತಪ್ಪಿಲ್ಲವೊ**=ಮರಳುಗಾಡಿನಲ್ಲಿ ಹರಿಯುತ್ತಿರುವ ತೊರೆಯು ಮರಳ ಕಣಗಳ ರಾಶಿಯಲ್ಲಿ ಸಿಲುಕಿ ಬತ್ತಿಹೋಗದೆ ಮುಂದೆ ಮುಂದೆ ಸಾಗುವಂತೆ, ಸಂಪ್ರದಾಯದ ತಿಳಿಗೇಡಿತನದ ಆಚರಣೆಗಳ ನಡುವೆ ಸಿಲುಕಿ ಮಾನವರ ಮನದಲ್ಲಿ ಮೂಡಿದ ಒಳ್ಳೆಯ ವಿಚಾರಗಳು ನಾಶವಾಗದೆ ಉಳಿದು ಯಾವ ನೆಲೆಯಲ್ಲಿ ಮುಂದುವರಿಯುತ್ತಿವೆಯೊ;

ಕರ್ಮ=ಕೆಲಸ; ವಿಚಾರದ+ಒಡಗೂಡಿ; ವಿಚಾರ=ವಿವೇಕದ/ನ್ಯಾಯದ ಸಂಗತಿ; ಒಡಗೂಡಿ=ಜತೆಸೇರಿ;

**ಕರ್ಮವು ವಿಚಾರದೊಡಗೂಡಿ**=ವ್ಯಕ್ತಿಯು ಮಾಡುವ ಕೆಲಸವು ಒಳ್ಳೆಯ ಉದ್ದೇಶದಿಂದ ಕೂಡಿರುವುದು;

ಪ್ರಜ್ಞೆ=ಅರಿವು/ತಿಳುವಳಿಕೆ; ಸತತ=ಯಾವಾಗಲೂ/ನಿರಂತರ; ವಿಸ್ತರಿಸಲು+ ಉಪಕ್ರಮಿಸು+ಅಂತೆ; ವಿಸ್ತರಿಸು=ಹರಡು/ಹಬ್ಬು; ಉಪಕ್ರಮಿಸು=ತೊಡಗು/ ಮೊದಲು ಮಾಡು; ಅಂತೆ=ಹಾಗೆ;

**ಪ್ರಜ್ಞೆಯನು ಸತತವೂ ವಿಸ್ತರಿಸಲುಪಕ್ರಮಿಸುವಂತೆ**=ನಿರಂತರವಾಗಿ ಅರಿವನ್ನು ಹೆಚ್ಚು ಹೆಚ್ಚು ಪಡೆಯುತ್ತಿರುವ ಹಾಗೆ;

ನೀ=ನೀನು/ದೇವರು/ಒಳ್ಳೆಯ ನಡೆನುಡಿಗಳಿಗೆ ಪ್ರೇರಕ ಶಕ್ತಿಯಾದ ನೀನು;

ಮುನ್ನಡೆಸುತ+ಇಹೆಯೊ; ಮುನ್ನಡೆಸು=ಮುಂದೆ ನಿಂತು ದಾರಿ ತೋರುವುದು; ಇಹೆಯೊ=ಇರುವೆಯೊ;

**ನೀ ಮುನ್ನಡೆಸುತಿಹೆಯೊ**=ಒಳ್ಳೆಯ ನಡೆನುಡಿಗಳಿಗೆ ಪ್ರೇರಣೆಯನ್ನು ನೀಡುವ ದೇವರಾದ ನೀನು ಎಲ್ಲರನ್ನೂ ಮುನ್ನಡೆಸುತ್ತಿರುವೆಯೊ;

**ಎಲ್ಲಿ ಕರ್ಮವು ವಿಚಾರದೊಡಗೂಡಿ ಪ್ರಜ್ಞೆಯನು ಸತತವೂ ವಿಸ್ತರಿಸಲು ಪಕ್ರಮಿಸುವಂತೆ ನೀ ಮುನ್ನಡೆಸುತಿಹೆಯೊ**=ಯಾವ ನೆಲೆಯಲ್ಲಿ ವ್ಯಕ್ತಿಯು ಒಳ್ಳೆಯ ಉದ್ದೇಶದಿಂದ ಕೆಲಸವನ್ನು ಮಾಡುತ್ತ, ಜತೆಜತೆಗೆ ನಿರಂತರವಾಗಿ ತನ್ನ ಅರಿವನ್ನು ಹೆಚ್ಚು ಮಾಡಿಕೊಳ್ಳುತ್ತಿರುವ ಹಾಗೆ ನೀನು ಮುಂದೆ ನಿಂತು ಮುನ್ನಡೆಸುತ್ತಿರುವೆಯೊ;

ಎನ್ನ=ನನ್ನ; ತಂದೆ=ದೇವರನ್ನು ಈ ಬಗೆಯ ನುಡಿಯಿಂದ ಕರೆಯಲಾಗಿದೆ. ಕವಿಯು ಕಲ್ಲು/ಮಣ್ಣು/ಮರ/ಲೋಹದಿಂದ ಮಾಡಿರುವ ವಿಗ್ರಹರೂಪದಲ್ಲಿ ದೇವರನ್ನು ಕಾಣುತ್ತಿಲ್ಲ. ನಿತ್ಯ ಜೀವನದಲ್ಲಿ ಮಾನವನ ಮನಸ್ಸಿನಲ್ಲಿ ಒಳಿತಿನ ನಡೆನುಡಿಗಳನ್ನು ಪ್ರೇರೇಪಿಸುವ ವ್ಯಕ್ತಿಯನ್ನಾಗಿ ದೇವರನ್ನು ಕಲ್ಪಿಸಿಕೊಂಡಿದ್ದಾರೆ;

ಅಂಥ=ಅಂತಹ/ಆ ರೀತಿಯ; ನಾಡು+ಎಚ್ಚರಗೊಳ್ಳಲಿ; ನಾಡು=ದೇಶ; ಎಚ್ಚರ=ಜೋಪಾನವಾಗಿರುವಿಕೆ/ಹುಷಾರಾಗಿರುವಿಕೆ;

**ನನ್ನ ತಂದೆ ಅಂಥ ಮುಕ್ತ ನಾಕದೊಳಗೆನ್ನ ನಾಡೆಚ್ಚರಗೊಳ್ಳಲಿ**=ದೇವರಾದ ನನ್ನ ತಂದೆಯೇ, ಚೆಲುವು ಒಲವು ನೆಮ್ಮದಿಯಿಂದ ಕೂಡಿದ ಆನಂದಮಯವಾದ ನೆಲೆಯೊಳಗೆ ನನ್ನ ನಾಡಿನ ಜನರು ಅರಿವು ಮತ್ತು ಎಚ್ಚರದಿಂದ ಬಾಳುವಂತಾಗಲಿ;

ಕನ್ನಡ ಅನುವಾದ : **ಜೆ. ರಾಮಲಿಂಗೇಗೌಡ**

## ೧೬ ಮೋಹ

ನಿಡುಸುಯ್ದು ನದಿಯ ಈ ದಡ ಹೇಳಿತತಿ ನೊಂದು
**“ಬಲ್ಲೆ ಸುಖವೆಲ್ಲ ಆ ದಡದೊಳಿದೆ”** ಎಂದು
ಆ ದಡವೊ ಬಿಸುಸುಯ್ದು ನಿಡು ನುಡಿಯಿತೆದೆ ಬೆಂದು
**“ಸುಖವಿದ್ದರೆಲ್ಲ ಆ ದಡದೊಳಿದೆ”** ಎಂದು.

**ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವನದ ಯಾವುದಾದರೊಂದು ಹಂತದಲ್ಲಿ ತನ್ನ ಬದುಕಿನ ರೀತಿನೀತಿಗಳನ್ನು ಮತ್ತು ಆಗುಹೋಗುಗಳನ್ನು ಮತ್ತೊಬ್ಬರ ಬದುಕಿನೊಡನೆ ಹೋಲಿಸಿ ನೋಡಿಕೊಂಡು, ತನ್ನ ಬದುಕಿನಲ್ಲಿ ತಾನು ಕಾಣದ ಒಲವು ನಲಿವು ನೆಮ್ಮದಿಯು ಅವರ ಬದುಕಿನಲ್ಲಿ ಇದೆಯೆಂದು ಪರಿತಪಿಸುವ ಬಗೆಯನ್ನು ಈ ಕವನದಲ್ಲಿ ನದಿಯೊಂದರ ಎರಡು ದಡಗಳ ಮಾತಿನ ಕಲ್ಪನೆಯ ರೂಪಕದ ಮೂಲಕ ಚಿತ್ರಿಸಲಾಗಿದೆ.**

(ಮೋಹ=ತಪ್ಪು ತಿಳುವಳಿಕೆ; ಭ್ರಮೆ/ಭ್ರಾಂತಿ ನಿಡಿದು+ಸುಯ್=ನಿಡುಸುಯ್; ನಿಡಿದು=ಉದ್ದವಾದುದು/ನೀಳವಾದುದು; ಸುಯ್=ಉಸಿರು; ನಿಡುಸುಯ್= ಜೀವನದಲ್ಲಿ ನಿರಾಶೆ, ಸಂಕಟ ಮತ್ತು ಬಹು ಬಗೆಯ ವೇದನೆಗೆ ಗುರಿಯಾಗಿ ವ್ಯಕ್ತಿಯು ನರಳುವಾಗ ಬಿಡುವ ನಿಟ್ಟುಸಿರು;

ನದಿ=ಹೊಳೆ/ತೊರೆ; ದಡ=ತೀರ/ದಂಡೆ/ಅಂಚು; ಈ ದಡ=ನದಿಯ ಒಂದು ಪಕ್ಕದಲ್ಲಿರುವ ದಡ; ಆ ದಡ=ನದಿಯ ಮತ್ತೊಂದು ಪಕ್ಕದಲ್ಲಿರುವ ದಡ; ಹೇಳಿತು+ಅತಿ; ಹೇಳು=ನುಡಿ; ಅತಿ=ಹೆಚ್ಚು; ನೊಂದು=ಸಂಕಟಪಡುತ್ತ;

ಬಲ್=ತಿಳಿ/ಅರಿ; ಬಲ್ಲೆ=ತಿಳಿದಿದ್ದೇನೆ/ಅರಿತಿದ್ದೇನೆ; ಸುಖ+ಎಲ್ಲ; ಸುಖ=ಒಲವು, ನಲಿವು, ನೆಮ್ಮದಿಯಿಂದ ಕೂಡಿದ ಬದುಕು; ದಡ+ಒಳ್+ಇದೆ; ಒಳ್=ಅಲ್ಲಿ; ದಡದೊಳ್=ದಡದಲ್ಲಿ;

ಬಿಸಿದು+ಸುಯ್; ಬಿಸಿದು=ಬಿಸಿಯಾದ/ಬೆಚ್ಚನೆಯ; ಬಿಸುಸುಯ್=ಸಂಕಟ ದಿಂದ ನೋಯುತ್ತಿರುವಾಗ ವ್ಯಕ್ತಿಯಿಂದ ಹೊರಹೊಮ್ಮುವ ಬಿಸಿಯುಸಿರು; ನುಡಿಯಿತು+ಎದೆ; ನಿಡು ನುಡಿಯಿತು=ವಿವರವಾಗಿ ಹೇಳಿತು; ಎದೆ=ಮನಸ್ಸು; ಎದೆ ಬೆಂದು=ಮನಸ್ಸು ಸಂಕಟದಿಂದ ಬೇಯುತ್ತ; ಸುಖ+ಇದ್ದರೆ+ಎಲ್ಲ;

**“ಬಲ್ಲೆ ಸುಖವೆಲ್ಲ ಆ ದಡದೊಳಿದೆ/ಸುಖವಿದ್ದರೆಲ್ಲ ಆ ದಡದೊಳಿದೆ”**= ಇದೊಂದು ರೂಪಕವಾಗಿ ಬಳಕೆಯಾಗಿದೆ. ಪ್ರತಿಯೊಬ್ಬ ವ್ಯಕ್ತಿಯೂ ತಾನು ಹೊಂದಿರುವುದಕ್ಕಿಂತ ಹೆಚ್ಚಾಗಿ ತನ್ನಲ್ಲಿ ಇಲ್ಲದ್ದನ್ನೇ ಕುರಿತು ಚಿಂತಿಸುವುದರಿಂದ, ಮತ್ತೊಬ್ಬನತ್ತ ಬೆರಳು ಮಾಡಿ ತೋರಿಸುತ್ತಾ, ‘ಅವನು ಪರಿಪೂರ್ಣವಾದ ರೀತಿಯಲ್ಲಿ ಒಲವು ನಲಿವು ನೆಮ್ಮದಿಯ ಬದುಕನ್ನು ಹೊಂದಿದ್ದಾನೆ’ ಎಂಬ ತಪ್ಪುಗ್ರಹಿಕೆಯಿಂದ ನರಳುತ್ತಿರುತ್ತಾನೆ.

ಈ ಬಗೆಯ ತಪ್ಪುಗ್ರಹಿಕೆಯು ಎಲ್ಲ ವ್ಯಕ್ತಿಗಳಲ್ಲಿಯೂ ತುಸು ಹೆಚ್ಚು ಕಡಿಮೆ ಬೇರೆ ಬೇರೆ ಪ್ರಮಾಣದಲ್ಲಿರುತ್ತದೆ ಎಂಬ ಸಾಮಾಜಿಕ ವಾಸ್ತವವನ್ನು ಈ ರೂಪಕ ಸೂಚಿಸುತ್ತಿದೆ.

ಕನ್ನಡ ಅನುವಾದ : **ಕುವೆಂಪು**

# ಬರಹಗಾರ

**ಹೆಸರು** : ಸಿ.ಪಿ.ನಾಗರಾಜ (೧೯೪೫)

**ತಾಯಿ** : ಲಕ್ಶ್ಮಿದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

**ತಂದೆ** : ಪುಟ್ಟೇಗೌಡ, ಚೆಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

**ಓದು** : ಎಂ.ಎ., ಪಿಎಚ್.ಡಿ.,

**ಕೆಲಸ** : ಕನ್ನಡ ಅಧ್ಯಾಪಕ

೧೯೭೧-೭೨ ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ.

೧೯೭೨-೨೦೦೩ ಭಾರತಿ ಕಾಲೇಜು, ಕಾಳಮುದ್ದನದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

೨೦೦೬-೨೦೨೧ ತೇಜಸ್ವಿ ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಶ್ಮೀ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

## ಬರಹ

### ೧. ಮುದ್ರಿತ ಪುಸ್ತಕಗಳು

**ನಾಟಕ:** ಭಾಗೀರಥಿ | ಅಂಬೆ | ಹಾವು | ಅಂಗಿಬಟ್ಟೆ | ಒಂದು ರೂಪಾಯಿ | ಕಳ್ಳರಿದ್ದಾರೆ ಎಚ್ಚರಿಕೆ | ಹೆಣದ ಹಣ | ಮೂರು ಸಾಮಾಜಿಕ ನಾಟಕಗಳು

**ಗದ್ಯ:** ಕರಿಯನ ಪುರಾಣ | ಕನಕನ ಅವ್ವ | ಹಳ್ಳಿಗಾಡಿನ ರೂವಾರಿ | ಡಾ. ಬಂದೀಗೌಡ | ಆಣೆ ಪ್ರಮಾಣಗಳು | ಬಯ್ಗುಳ | ಸರ್ವಜ್ಞ ವಚನಗಳ ಓದು | ಅಲ್ಲಮ ವಚನಗಳ ಓದು | ಶಿವಶರಣೆಯರ ವಚನಗಳ ಓದು | ಶಿವಶರಣರ ವಚನಗಳ ಓದು | ಬಸವಣ್ಣ ವಚನಗಳ ಓದು | ಮುದ್ದೆಗಂಟು | ಶಿವಶರಣಶರಣೆಯರ ವಚನಗಳ ಓದು

ಪಂಪ ಭಾರತ ಓದು ಸರ್ವಜ್ಞ ಮತ್ತು ಅಲ್ಲಮ ವಚನಗಳ ಓದು
ವಚನದಿಂದ ಆಯ್ದ ಸಾಲುಗಳ ಓದು
ಕುವೆಂಪು ಕವನಗಳ ಓದು ಕನ್ನಡ ಬಯ್ಗುಳ ಓದು
ಬಸವಯುಗದ ವಚನಕಾರರು
ಕನಕದಾಸರ ರಾಮಧಾನ್ಯ ಪ್ರಸಂಗ ಓದು
ಪಂಪ ಭಾರತ ಪ್ರಸಂಗ

## ೨. ಮೈಲಾಂಗ್ ಮತ್ತು ಋತುಮಾನ ಡಿಜಿಟಲ್ ಪುಸ್ತಕಗಳು

ಏಳು ನಾಟಕಗಳು(ಇಬುಕ್); ಭಾಗೀರಥೀ(ನಾಟಕ–ಇಬುಕ್); ಅಂಬೆ (ನಾಟಕ–ಇಬುಕ್); ಹಾವು (ನಾಟಕ–ಇಬುಕ್); ಅಂಗಿಬಟ್ಟೆ(ನಾಟಕ–ಇಬುಕ್); ಒಂದು ರೂಪಾಯಿ (ನಾಟಕ–ಇಬುಕ್); ಕಳ್ಳರಿದ್ದಾರೆ ಎಚ್ಚರಿಕೆ (ನಾಟಕ–ಇಬುಕ್); ಹೆಣದ ಹಣ(ನಾಟಕ–ಇಬುಕ್); ಶಿವಶರಣಶರಣೆಯರ ವಚನಗಳ ಓದು(ಇಬುಕ್); ಬಯ್ಗುಳ(ಆಡಿಯೋ ಬುಕ್); ಸರ್ವಜ್ಞನ ವಚನಗಳ ಓದು (ಆಡಿಯೋ ಬುಕ್); ಅಲ್ಲಮನ ವಚನಗಳ ಓದು(ಆಡಿಯೋ ಬುಕ್); ಬಸವಣ್ಣನ ವಚನಗಳ ಓದು(ಆಡಿಯೋ ಬುಕ್); ಶಿವಶರಣಶರಣೆಯರ ವಚನಗಳ ಓದು–ಭಾಗ–೧ (ಆಡಿಯೋ ಬುಕ್); ಶಿವಶರಣಶರಣೆಯರ ವಚನಗಳ ಓದು–ಭಾಗ–೨–(ಆಡಿಯೋ ಬುಕ್); ವಚನದಿಂದ ಆಯ್ದ ಸಾಲುಗಳು ಓದು–ಭಾಗ–೧–(ಆಡಿಯೋ ಬುಕ್); ವಚನದಿಂದ ಆಯ್ದ ಸಾಲುಗಳು ಓದು–ಭಾಗ–೨–(ಆಡಿಯೋ ಬುಕ್); ಮುದ್ದೆಗಂಟು(ಆಡಿಯೋ ಬುಕ್)

## 3. C P Nagaraj-You Tube

Play lists
ಸರ್ವಜ್ಞನ ವಚನಗಳ ಓದು–೧೩ ಎಪಿಸೋಡ್
ಅಲ್ಲಮನ ವಚನಗಳ ಓದು– ೩೬ ಎಪಿಸೋಡ್
ಬಸವಣ್ಣನ ವಚನಗಳ ಓದು–೨೬ ಎಪಿಸೋಡ್
ಶಿವಶರಣಶರಣೆಯರ ವಚನಗಳ ಓದು–೫೨ ಎಪಿಸೋಡ್
ವಚನದಿಂದ ಆಯ್ದ ಸಾಲುಗಳ ಓದು–೧೬೨ ಎಪಿಸೋಡ್
ಮುದ್ದೆಗಂಟು–೬೦ ಎಪಿಸೋಡ್
ಹಳ್ಳಿಗಾಡಿನ ರೂವಾರಿ ಜಿ.ಮಾದೇಗೌಡ–೧೫ ಎಪಿಸೋಡ್
ಜನಪರ ಚೇತನ ಡಾ.ಬಂದೀಗೌಡ–೧೫ ಎಪಿಸೋಡ್
ಕುವೆಂಪು ಕವನಗಳ ಓದು–೧೩ ಎಪಿಸೋಡ್

ಪಂಪ ಭಾರತ ಪ್ರಸಂಗಗಳು – ೯ ಎಪಿಸೋಡ್
ಭಾಷೆಯ ಬಗೆಗೆ ನೀವೇನು ಬಲ್ಲಿರಿ–೪೧
(ಡಿ.ಎನ್. ಶಂಕರ ಭಟ್)
ಸಮಗ್ರ ಬುದ್ಧ ಸಾಹಿತ್ಯ ಮಾಲೆ–೩೦
(ಸಿ.ಎಚ್. ರಾಜಶೇಖರ್)
ನುಡಿಯರಿಮೆ ಬರಹಗಳು–೨೬
(ಕೆ.ವಿ. ನಾರಾಯಣ)
ಗೂಗಿ ವಾ ಥಿಯಾಂಗೊ ವೈಚಾರಿಕ ಬರಹಗಳು–೧೩
(ಅನುವಾದ : ಎಚ್.ಎಸ್. ನಾಗಭೂಷಣ)
ಎದೆಗೆ ಬಿದ್ದ ಅಕ್ಷರ–೨೯
(ದೇವನೂರು ಮಹಾದೇವ)
ವೇದಗಳಲ್ಲಿ ಜನಸಾಮಾನ್ಯರು–೪೦
(ಬಿ.ವಿ. ವೀರಭದ್ರಪ್ಪ)
ಆಣೆ ಪ್ರಮಾಣಗಳ ಓದು–೧೦
ರಾಮಧಾನ್ಯ ಪ್ರಸಂಗ–೧
(ಕನಕದಾಸ)
The conquest of Happiness
(ಮೂಲ : ಬರ್ಟಂಡ್ ರಸೆಲ್)
ಸುಖ ಸಾಧನೆ–೬೩
(ಕನ್ನಡ ಅನುವಾದ : ಎಚ್. ಯೋಗ ನರಸಿಂಹಮ್)
ಕನ್ನಡ ಜಗತ್ತು– ಅರ್ಧ ಶತಮಾನ–೯೫
(ಕೆ.ವಿ. ನಾರಾಯಣ)

---

**ವಿಳಾಸ :** ಸಿ.ಪಿ.ನಾಗರಾಜ, 75, 5ನೇ ಕ್ರಾಸ್, 'ಎ' ಬ್ಲಾಕ್, ಕ್ರಿಷ್ಣ ಗಾರ್ಡನ್, ಆರ್.ವಿ. ಕಾಲೇಜು ಅಂಚೆ, ಬೆಂಗಳೂರು–560 059. ಮೊ : 9986347521
e-mail : ngy7777@gmail.com

ಕನಸು ಕಾಣುವ ಧೀರರೆಲ್ಲ ಸೋಲುಂಡಾಗ
ಸೋಲುಗಳನೊಗೆಯುವರು ಹಿಂದೆ ಮಣ್ಣಿನಲಿ
ಅವು ಮೊಳೆತು ನೆಲದಲ್ಲಿ ಚಿಸುರೊಡೆದು ಬೆಳೆಯುವುವು
ಗೆಲುವಿನಾ ಗೆಲ್ಲುಗಳು ಬಾಗಿ ಫಲಗಳಲಿ.

– ರವೀಂದ್ರನಾಥ ಠಾಕೂರ್

ನಾಸು ಸ್ಮಾರಕ ಪ್ರಕಾಶನ, ಬೆಂಗಳೂರು.

ರೂ. 100/–